Photo by Vidyavrata



ಬಹುಮಾನ
ಪಡೆದ ಶೀರ್ಷಿಕೆ

**ಕೈಬಿಡದ ಪುರುಷನೇ ಪೌರುಷಶಾಲಿ!**

ಕಳಿಸಿದವರು:
ಕುಮಾರಿ ಸುಶೀಲಾ






# ಜಾನಕಿ

ಲಕ್ಸ್ ಟಾಯಿಲೆಟ್ ಸೋಪನ್ನು ಉಪಯೋಗಿಸುತ್ತಾಳೆ.
"ಇಷ್ಟು ಬಿಳಿಯಾದ, ಇಷ್ಟು ಶುದ್ಧವಾದ ಸೋಪು ಇದೊಂದೇ ಎಂದು ತಿಳಿದಿದ್ದೇನೆ!"

ಚಲಚ್ಚಿತ್ರಗಳಲ್ಲಿ ಸದಾ ಯಶಸ್ವಿಯಾಗಿರುವುದಕ್ಕೆ ಅವುಗಳಲ್ಲಿ ಭಾಗವಹಿಸಿಕೊಂಡಿರುವುದು ಮಾತ್ರವೇ ಸಾಲದೆಂಬುದು ಜಾನಕಿಗೆ ಗೊತ್ತಿದೆ. ಅವಳು ಯಾವಾಗಲೂ ಲಕ್ಸ್ ಟಾಯಿಲೆಟ್ ಸೋಪನ್ನು ಉಪಯೋಗಿಸಿ ತನ್ನ ಕೋಮಲ ಚರ್ಮದ ವಿಷಯದಲ್ಲಿ ಜಾಗರೂಕತೆಯನ್ನು ತೆಗೆದುಕೊಳ್ಳುತ್ತಾಳೆ.

ಅತ್ಯಂತ ಬಿಳಿಯಾಗಿರುವ, ಶುದ್ಧವಾದ ಲಕ್ಸ್ ಟಾಯಿಲೆಟ್ ಸೋಪು ಬಹಳ ಸೌಮ್ಯ ರೀತಿಯಲ್ಲಿ, ಖಾತ್ರಿಯಾಗಿ ಚರ್ಮದ ವಿಷಯ ಜಾಗರೂಕತೆಯನ್ನು ತೆಗೆದುಕೊಳ್ಳುತ್ತದೆ. ಅತ್ಯಂತ ಸುಂದರ ಸಿನೆಮ ತಾರೆಯರಂತೆ ನೀವು ಕೂಡ ಅದರ ಮೇಲೆ ಭರವಸೆಯಿಡಿರಿ.

## ಲಕ್ಸ್ ಟಾಯಿಲೆಟ್ ಸೋಪು

ಸಿನೆಮ ತಾರೆಯರ ಸೌಂದರ್ಯ-ಸೋಪು

LTS. 514-50 KN

# ಚಂದಮಾಮ

ಈ ಸಂಚಿಕೆಯಲ್ಲಿ

## ಒಗೆಯಬಲ್ಲ ಬಟ್ಟೆಗಳೆಲ್ಲವನ್ನೂ ತಾತಾರವರ **501** ಬಾರ್ ಸಾಬೂನಿನಿಂದ ಒಗೆಯಬಹುದು!




**ಇದಕ್ಕೆ 25 ವರ್ಷಗಳ ಉತ್ಕೃಷ್ಟತೆಯ ಪ್ರಸಿದ್ಧಿ ಇದೆ**

**ಸಂಪೂರ್ಣ ಭಾರತೀಯ ಬಂಡವಾಳ · ಸಂಚಾಲಕತ್ವ · ಶ್ರಮ**

ದಿ ತಾತಾ ಆಯಿಲ್ ಮಿಲ್ಸ್ ಕಂಪೆನಿ, ಲಿಮಿಟೆಡ್

ಸೇಲ್ಸ್ ಆಫೀಸ್: 2, ಮಹಾತ್ಮಾ ಗಾಂಧೀ ರೋಡ್, ಬೆಂಗಳೂರು-1

# ಮತ್ತೆ ಈಗ

## ಹೊಸ ಮಾದರಿಯ

# ಟಾಯ್‌ಲೆಟ್ ಪೌಡರ್

## ದಿನವಿಡಿಯ ನಾವೀನ್ಯಕ್ಕೆ

**ಭಾ**ರತದಲ್ಲಿ ಮೊಟ್ಟಮೊದಲಿಗೆ, ಅತ್ಯುತ್ತಮವಾದ ಟಾಲಕಮ್ ಪೌಡರ್ ವಿಶ್ವವಿಖ್ಯಾತವಾದ ಈಚೀಚಿಯು ಹಾಗೂ ಕಡೆಯ **ಜಿ-೧೧** ❋ ದೊಡನೆ ಕೂಡಿರುವದು. ಇದು ಚರ್ಮದೋಷಗಳಿಗೆ ಮತ್ತು ಬೆವರಿನ ದುರ್ಗಂಧಕ್ಕೆ ಕಾರಣವಾದ ಕ್ರಿಮಿಗಳನ್ನು ನಾಶಮಾಡುವ, ಕೆಡರುವ ಗುಣವಿಲ್ಲದ ಒಂದೇ ಒಂದು **ಪ್ರಯೋಗ** ಸಿದ್ಧವಾದ ರಸಾಯನಿಕ ವಸ್ತು. ಈ ಅದ್ಭುತ ಪೌಡರ್ ಸೆಖೆಕುರುಗಳಿಂದ ಮತ್ತು ಟುವಾಲಿನ ಉಜ್ಜುವಿಕೆಯಿಂದುಂಟಾಗುವ ಹುಣ್ಣುಗಳಿಂದ (ಮಕ್ಕಳ ಬಾಬತು) ತೀವ್ರ ಮತ್ತು ಬಾಳುವ ಶಾಂತಿಯನ್ನೀಡುವುದು.

ಕೆಲಸ, ಆಟ, ವಿಹಾರ, ಕೂಟಗಳಿಗೆ ಹೋಗುವ ಮುಂಚೆ, ಈ ಸಂತವಿಸುವ ಮನೋಹರ ಸುವಾಸನೆಯ ಪೌಡರನ್ನು ನಿಮ್ಮ ಮೇಲೆ ಚಿಮುಕಿಸಿಕೊಳ್ಳಿರಿ. ಅಂದರೆ ನಿಮ್ಮಲ್ಲಿ ಹೆಚ್ಚು **ಆತ್ಮವಿಶ್ವಾಸ** ವುಂಟಾಗುವುದು. ನೀವು ಹೆಚ್ಚು **ಸ್ವೀಕಾರಾರ್ಹರಾಗುವಿರಿ.** ಬಟ್ಟೆಗಳಲ್ಲಿ ಚಿಮುಕಿಸಿದರೆ ಅದು ತಿಕ್ಕಾಟದ ಸೆಖೆಯನ್ನು ತಡೆಗಟ್ಟುವುದು.

Godrej ರಿಜಿಸ್ಟರ್ಡ

**ಜಿ-೧೧ ದಿಂದ ಕೂಡಿರುವ**

# ಗೋದ್ರೆಜ್

# ಟಾಯ್‌ಲೆಟ್ ಪೌಡರ್




**ಸಿಂಥಾಲ್ ಸಾಬೂನು**
**ಹೆರ್ ಟಾನಿಕ್ (ಕೂದಲಿನ ಎಣ್ಣೆ)**
**ಶೇವಿಂಗ್‌ಸ್ಟಿಕ್ (ಕ್ಷೌರದ ಸಾಬೂನು)**
**ಇವು ಕೂಡ ಜಿ-೧೧ ರಿಂದ ಕೂಡಿರುವುವು**

❋ ವೈಜ್ಞಾನಿಕ ಗ್ರಂಥ ವಿವರಣೆಯಿಂದಕೂಡಿದ ಜಿ-೧೧ (ಹೆಕ್ಸಾಕ್ಲೊರೊಫೀನ್) ಕಥೆಗೆ (ಅಂಗ್ರೇಜಿ) ಬರೆಯಿರಿ. ಗೋದ್ರೆಜ್ ಸೋಪ್ಸ್ ಪ್ರಾಯ್‌ವೆಟ್ ಲಿಮಿಟೆಡ್ ಮುಂಬಯಿ ೧೧.
ಭಾರತದಲ್ಲಿ ಉಪಯೋಗಿಸಲು ಗೋದ್ರೆಜರವರಿಂದ ಪೂರ್ಣಹಕ್ಕು ಕಾದಿಡಲ್ಪಟ್ಟಿದೆ.



# ಚಂದಮಾಮ

ಸಂಚಾಲಕರು : 'ಚಕ್ರಪಾಣಿ'

**ಬೇ**ಸಿಗೆ ರಜೆಯ ಮಧ್ಯಕಾಲ ನಿಮಗೀಗ. ಮೊನ್ನೆ ಯುಗಾದಿ ಹಬ್ಬದ ಸಮಯದಲ್ಲಿ ಹೊಸವರ್ಷಕ್ಕೆ ಪ್ರವೇಶಮಾಡಿದ ನೀವು ನಿಮ್ಮೊಂದಿಗೇ ಪ್ರವೇಶಮಾಡಿದ ಹೊಸತನಗಳನ್ನೂ ಜತೆಗೂಡಿಸಿ ಕೊಂಡಿರುತ್ತೀರಿ. ಆ ಹೊಸತನಗಳು ಯಾವುದು ಗೊತ್ತಾಯಿತೆ? ಒಂದು ಹೊಸ ನಾಣ್ಯಪದ್ಧತಿ, ದಶಾಂಶ ನಾಣ್ಯಗಳಾದ ನಯಾ ಪೈಸಾ. ಇನ್ನೊಂದು ಶಕಪಂಚಾಂಗ. ಇವೆರಡೂ ತುಸು ಹೆಚ್ಚು ಕಡಮೆ ಈ ಯುಗಾದಿವೇಳೆಯಲ್ಲೇ ನಿಮ್ಮೊಂದಿಗೆ ಕೂಡಿಕೊಂಡಿರುವ ಹೊಸ ಗೆಳೆಯರು. ಆದುದರಿಂದ ನೀವು ಈ ವರ್ಷ ಪ್ರವೇಶಮಾಡಿದ ಬೇಸಿಗೆಯ ರಜೆಯ ಬಾಗಿಲನ್ನು ಎಂದೂ ಮರೆಯದಂತಾಗಿದೆ. ಇಂತಹ ರಜಾ ಕಾಲವನ್ನು ನೀವು ಎಂದಿನಂತೆಯೇ ಬರಿಯ ಆಟಗಳಿಂದಲೇ ಕಳೆಯುತ್ತಿದ್ದೀರಾ? ನಿಮ್ಮೊಂದಿಗೇ ಪ್ರವೇಶಮಾಡಿದ ಗೆಳೆಯರ ನೆನಪಿಗಾಗಿ, ಕಥಾರಚನೆಯೋ, ಪ್ರಬಂಧ ರಚನೆಯೋ, ಚಿತ್ರವೋ, ತೋಟಗಾರಿಕೆಯೋ ಅಥವಾ ಮತ್ತಾವುದಾದರೂ ನಿಮಗಿಷ್ಟವಾದೊಂದು ಕೆಲಸ ಮಾಡಿರಿ— ಅಥವಾ ಪ್ರಾರಂಭಿಸಿರಿ. ಹಾಗೆ ಪ್ರಾರಂಭಿಸಿದ್ದನ್ನು ಅವಕಾಶವಾದಾಗ ಮುಂದುವರಿಸುತ್ತಾ ಹೋಗಿರಿ. ನೀವು ಬಳೆದಂತೆ ಅದೂ ಬಳೆಯಲಿ. ಮುಂದೆ ನಿಮಗೆ ಅದೊಂದು ಒಳ್ಳೆಯ ಫಲವನ್ನೀಯಬಹುದು. ಹೀಗೆ ನೀವು ಆಡದೆ ಕೆಲಸಮಾಡುತ್ತಾ ಇರಬೇಕೆಂದು ಹೇಳುವುದಲ್ಲ. ಆಡಿರಿ, ತುಂಬಾ ಆಡಿರಿ. ಆದರೆ ಬರಿಯ ಆಟವನ್ನೇ ದಿನವಿಡೀ ಆಡುತ್ತಿರಬಾರದು. ಏಕೆಂದರೆ, ನೀವು ಮುಂದೆ ಬಳೆದು ದೊಡ್ಡವರಂತೆ ಆಗಬೇಡವೇ?

ಸಂಪುಟ ೧೮ ಮೇ ೧೯೫೭ ಸಂಚಿಕೆ ೫

# ತಂದೆ - ಮಗ





# ಮುಖಚಿತ್ರ

ಅಜ್ಞಾತವಾಸಕ್ಕಾಗಿ ಪಂಚಪಾಂಡವರೂ ದ್ರೌಪದಿಯೂ ತಮ್ಮ ವೇಷಗಳನ್ನು ಬದಲಾಯಿಸಿಕೊಂಡಮೇಲೆ ಧರ್ಮರಾಯನು ಮೊದಲು ಹೊರಟನು. ಅವನು ವಿರಾಟರಾಯನ ದರಬಾರನ್ನು ಹೊಕ್ಕು, "ರಾಜನೇ ನಾನು ಮೊದಲು ಧರ್ಮರಾಯನ ಸಭೆಯಲ್ಲಿದ್ದೆ. ನನ್ನ ಹೆಸರು ಕಂಕ. ನನಗೆ ಪಗಡೆಯಾಟ ಚೆನ್ನಾಗಿ ಗೊತ್ತು. ನನ್ನನ್ನು ನಿಮ್ಮ ಸಭೆಯಲ್ಲಿ ಸೇರಿಸಿಕೊಳ್ಳಿ" ಎಂದು ಕೇಳಿಕೊಂಡನು. ವಿರಾಟನು ಸಂತೋಷದಿಂದ ಒಪ್ಪಿದ.

ಇಷ್ಟರಲ್ಲಿ ದ್ರೌಪದಿ ಸೈರಂಧ್ರಿಯಾಗಿ ವಿರಾಟನಗರವನ್ನು ಹೊಕ್ಕು ಬೀದಿಯಲ್ಲಿ ಸಾಗುತ್ತಿದ್ದಳು. ಅನೇಕರು ಅವಳನ್ನು ಕುರಿತು—"ತಾಯಿ, ಯಾರು ನೀನು?" ಎಂದು ಕೇಳಿದರು. "ನಾನು ಸೈರಂಧ್ರಿ. ಯಾರಾದರೂ ನನ್ನನ್ನು ಪೋಷಣೆಮಾಡಿದರೆ ಅವರಿಗೆ ನಾನು ಸೇವೆಮಾಡುತ್ತೇನೆ" ಎಂದು ಹೇಳುತ್ತಾ ನಡೆದಳು.

ಈ ವಾರ್ತೆ ವಿರಾಟರಾಯನ ಪತ್ನಿಯಾದ ಸುಧೇಷ್ಣೆಗೆ ತಿಳಿಯಿತು. ಅವಳು ದ್ರೌಪದಿಯನ್ನು ಕರೆಸಿ, "ನೀನು ಯಾರು?" ಎಂದು ಕೇಳಿದಳು.

"ಅಮ್ಮಾ, ನಾನು ಈಮೊದಲು ಸತ್ಯಭಾಮಾದೇವಿಯ ಬಳಿಯಲ್ಲಿಯೂ, ದ್ರೌಪದೀದೇವಿಯ ಬಳಿಯಲ್ಲಿಯೂ ಪರಿಚಾರಿಕೆಯಾಗಿದ್ದೆ. ನನ್ನ ಹೆಸರು ಮಾಲಿನಿ. ನನಗೆ ತಲೆಬಾಚಲಿಕ್ಕೆ, ಹೂಮಾಲೆ ಕಟ್ಟಲಿಕ್ಕೆ, ಅಲಂಕಾರಮಾಡಲಿಕ್ಕೆ ಚೆನ್ನಾಗಿ ಗೊತ್ತಿದೆ" ಎಂದಳು ಸೈರಂಧ್ರೀ ವೇಷದಲ್ಲಿರುವ ದ್ರೌಪದಿ.

"ನಿನ್ನನ್ನು ಅಂತಃಪುರದಲ್ಲಿಟ್ಟುಕೊಂಡರೆ ವಿರಾಟರಾಯನಿಂದಲೋ ಮತ್ತೆ ಯಾರಿಂದಲೋ ನಿನಗೆ ತೊಂದರೆಯಾಗುವುದೋ ಏನೋ?" ಎಂದಳು ಸುಧೇಷ್ಣೆ.

"ಅಮ್ಮಾ, ನನ್ನ ಗಂಡಂದಿರಾದ ಐದುಮಂದಿ ಯಕ್ಷರು ಕ್ಷಣಬಿಡದೆ ನನ್ನನ್ನು ಕಾಪಾಡುತ್ತಿದ್ದಾರೆ. ಆದ್ದರಿಂದ ನನಗೆ ಯಾರ ಭಯವೂ ಇಲ್ಲ" ಎಂದಳು ದ್ರೌಪದಿ. ಸುಧೇಷ್ಣೆ ಅವಳನ್ನು ತನ್ನ ಬಳಿ ಇಟ್ಟುಕೊಳ್ಳಲು ಒಪ್ಪಿಕೊಂಡಳು.

ಸ್ವಲ್ಪಹೊತ್ತಿನಲ್ಲಿ ಭೀಮನು ಅಡುಗೆಯವನ ವೇಷದಲ್ಲಿ ವಿರಾಟರಾಯನ ಬಳಿಗೆ ಬಂದು, "ಮಹಾರಾಜ, ನಾನು ವಲಲನೆಂಬ ಅಡುಗೆಯವ. ನನ್ನನ್ನು ನಿಮ್ಮಲ್ಲಿಟ್ಟುಕೊಳ್ಳಿ. ಅಗತ್ಯವಿದ್ದರೆ ಮಲ್ಲಯುದ್ಧ ಮಾಡಬಲ್ಲೆ. ಆದರೆ ಅಡುಗೆಯೇ ನನ್ನ ಕೆಲಸ" ಎಂದ. ವಿರಾಟನು ಆ ಪ್ರಕಾರವೇ ಭೀಮನನ್ನು ತನ್ನ ಅಡುಗೆಯವನಾಗಿ ನಿಯಮಿಸಿಕೊಂಡನು. ಅರಸನ ವಿನೋದಕ್ಕಾಗಿ ಭೀಮನು ಆಗಾಗ ಮಲ್ಲರನ್ನು ಸೋಲಿಸುತ್ತ, ಸಿಂಹ, ಶಾರ್ದೂಲಾದಿ ಭಯಂಕರ ಮೃಗಗಳೊಡನೆ ಜಗಳಾಡಿ ತನ್ನ ಬಾಹುಬಲವನ್ನು ಪ್ರದರ್ಶನಮಾಡುತ್ತ ಅಲ್ಲಿದ್ದ.



# ನರಕವಾಸಿ

ಬ್ರಹ್ಮದತ್ತನು ಕಾಶಿರಾಜ್ಯವನ್ನು ಆಳುತ್ತಿದ್ದ ಕಾಲದಲ್ಲಿ ಕಾಶಿನಗರದಲ್ಲಿ ಧನಿಕವರ್ತಕನೊಬ್ಬನಿದ್ದನು. ಆತನಿಗೆ ಮಿತ್ರವಿಂದನೆಂಬ ಮಗನಿದ್ದನು. ಮಿತ್ರವಿಂದನು ಪಾಪಿಷ್ಠ.

ಹಿರಿಯ ವರ್ತಕನು ತೀರಿಹೋದನಂತರ ಅವನ ಹೆಂಡತಿ ಮಗನೊಂದಿಗೆ " ಮಗೂ, ದಾನ ಮಾಡು. ನಿಯಮಗಳನ್ನು ಗಮನಿಸು. ನ್ಯಾಯ ಮಾರ್ಗವನ್ನು ಬಿಡಬೇಡ. ಧರ್ಮವನ್ನು ಅನುಸರಿಸು " ಎಂದು ಬುದ್ಧಿವಾದ ಹೇಳಿದಳು. ಆದರೆ ಅವನು ತಾಯಿಯ ಮಾತುಗಳನ್ನು ಕಿವಿಯ ಮೇಲೆ ಹಾಕಿಕೊಳ್ಳಲಿಲ್ಲ.

ಹೀಗಿರಲು ಕಾರ್ತಿಕಹುಣ್ಣಿಮೆ ಬಂತು. ಮಿತ್ರವಿಂದನೊಂದಿಗೆ ಅವನ ತಾಯಿ " ಮಗೂ, ಇಂದು ಪುಣ್ಯದಿನ. ಇಡೀದಿನ ದೇವಸ್ಥಾನದಲ್ಲಿ ಹಿರಿಯರು ಧರ್ಮೋಪದೇಶ ಮಾಡುವರು. ನೀನು ಪೂಜೆ ಮುಗಿಸಿಕೊಂಡು, ಹೋಗಿ ಉಪದೇಶ ಕೇಳಿಬಾ. ಮನೆಗೆ ಬಂದನಂತರ ನಾನು ನಿನಗೆ ಸಾವಿರ ರೂಪಾಯಿ ಕೊಡುವೆನು" ಎಂದು ಹೇಳಿದಳು.

ಮಿತ್ರವಿಂದನಿಗೆ ದೇವಸ್ಥಾನಕ್ಕೆ ಹೋಗಲು ಇಷ್ಟವಿಲ್ಲದಿದ್ದರೂ ಹಣದಸಲುವಾಗಿ ಹೋಗಲು ಒಪ್ಪಿಕೊಂಡನು. ಉಪದೇಶ ಕೇಳಲು ದೇವಸ್ಥಾನಕ್ಕೆ ಹೋದವನು ಉಪದೇಶ ಕೇಳಲಿಲ್ಲ; ಒಂದು ಮೂಲೆಯಲ್ಲಿ ಮಲಗಿ ಸುಖವಾಗಿ ನಿದ್ದೆಹೋದನು.

ಬೆಳಗಾದಕೂಡಲೇ ಎದ್ದು ಮುಖ ತೊಳೆದುಕೊಂಡು ಬೇಗಬೇಗನೆ ಮನೆಗೆ ಹಿಂತಿರುಗಿದನು. ತನ್ನ ಮಗನು ಸ್ವಾಮಿಗಳನ್ನು ಸಂಗಡ ಕರೆದುಕೊಂಡು ಬರುವನೆಂದಿದ್ದ ಅವನ ತಾಯಿ ಅಡಿಗೆ ಸಿದ್ಧಪಡಿಸಿದ್ದಳು. ಆದರೆ ಮಗನು ಒಬ್ಬನೇ ಬಂದುದನ್ನು ಕಂಡು ಆಕೆ ದಿಗ್ಭ್ರಮೆಗೊಂಡು " ಮಗೂ, ಸ್ವಾಮಿಗಳನ್ನು ಕರೆದುಕೊಂಡು ಬರಲಿಲ್ಲವೇ?" ಎಂದು ಕೇಳಿದಳು.

"ಅವರೇಕೆ ಬರಬೇಕು ಅಮ್ಮ. ನನಗೆ ಆತನಿಂದೇನೂ ಕೆಲಸವಿಲ್ಲವಲ್ಲಾ" ಎಂದ ಮಿತ್ರವಿಂದ.

ಮಿತ್ರವಿಂದನು ಭೋಜನ ಮುಗಿಸಿ, ತಾಯಿಯಬಳಿಗೆ ಹೋಗಿ ಆಕೆಯಿಂದ ಹಣ ಪಡೆದು ತನ್ನ ಕೆಲಸದಮೇಲೆ ಹೊರಟು



ಹೋದನು. ಆ ಹಣದಿಂದ ವ್ಯಾಪಾರಮಾಡಿ ಕೊಂಚಕಾಲಕ್ಕೆಲ್ಲಾ ಲಕ್ಷಾಂತರ ಗಳಿಸಿದನು.

"ತಾಯಿ ಕೊಟ್ಟ ಹಣವನ್ನು ಬಂಡವಾಳ ವಾಗಿಟ್ಟುಕೊಂಡು ದೊಡ್ಡ ವ್ಯಾಪಾರಮಾಡಿ ಮತ್ತಿಷ್ಟು ಹಣ ಸಂಪಾದಿಸಬಹುದು" ಎಂದು ಅವನು ಭಾವಿಸಿದನು. ಅನಂತರ ಒಂದು ಹಡಗನ್ನು ಬೆಲೆಗೆ ಪಡೆದು ಅದರಲ್ಲಿ ಹೇರಳ ಸರಕುಗಳನ್ನು ತುಂಬಿಸಿ, ಅನಂತರ ತಾನು ಕಡಲುಪ್ರಯಾಣ ಮಾಡಲಿರುವೆನೆಂದು ತಾಯಿಗೆ ಹೇಳಲು ಹೋದನು.

ಮಗನ ಮಾತುಗಳನ್ನು ಕೇಳಿ ಆಕೆ ಕಣ್ಣೀರು ಸುರಿಸಿದಳು. "ಮಗೂ, ಈಗ ನಿನಗೇನು ಕಡಿಮೆ ಯಾಗಿದೆ. ನನಗೆ ನೀನೊಬ್ಬನೇ ಮಗ. ನಿನ್ನ ಬಳಿ ಅಪಾರ ಹಣವಿದೆ. ಇನ್ನೂ ಹೆಚ್ಚು ಮತ್ತೂ ಹೆಚ್ಚು ಸಂಪಾದಿಸಿತಾನೇ ಏನು ಮಾಡುವೆ? ಈ ಬಗೆಯ ಮಿತಿಮೀರಿದ ಆಶೆ ಬೇಡವಪ್ಪಾ. ಕಡಲಪ್ರಯಾಣ ಕ್ಷೇಮವಲ್ಲ. ನನ್ನ ಮಾತನ್ನು ಕೇಳಿ ಈ ಪ್ರಯಾಣ ನಿಲ್ಲಿಸು. ಮನೆ ಯಲ್ಲೇ ಇರು" ಎಂದಳು.

ಮಿತ್ರವಿಂದನು ತಾಯಿಯ ಮಾತು ಕೇಳದೆ, ಹೋಗಲೇಬೇಕೆಂದು ಹಠಹಿಡಿದನು. ಆಕೆ ತನ್ನ ಮಗನ ಕೈಹಿಡಿದುಕೊಂಡು ಹೋಗಬೇಡವೆಂದು ಪರಿಪರಿಯಾಗಿ ಕೇಳಿಕೊಂಡಳು. ಆಗ ಮಿತ್ರ ವಿಂದನು ತುಂಬಾ ಸಿಟ್ಟುಗೊಂಡು ತಾಯಿ ಯನ್ನು ಹೊಡೆದುಬಡಿದು, ತನ್ನಷ್ಟಕ್ಕೆ ತಾನು ಹೊರಟುಹೋದನು. ಅಂದೇ ಅವನ ಹಡಗು ಹೊರಟಿತು. ಏಳು ದಿನ ಸಮುದ್ರಪ್ರಯಾಣ



ಸುಖವಾಗಿ ಸಾಗಿತು. ಆದರೆ ಎಂಟನೇ ದಿನ ನಡುರಾತ್ರಿ ಮಧ್ಯಸಮುದ್ರದಲ್ಲಿ ಹಡಗು ಒಂದೇ ಕಡೆ ನಿಂತುಬಿಟ್ಟಿತು. ಏನು ಮಾಡಿದರೂ ಮುಂದೆ ಹೋಗಲಿಲ್ಲ. ಈ ದುರ್ಘಟನೆಗೆ ಕಾರಣಕರ್ತರು ಯಾರೋ ಆ ಹಡಗಿನಲ್ಲೇ ಇರಬೇಕೆಂದು ಬಗೆದು ಚೀಟಿ ಹಾಕಿದರು. ಚೀಟಿ ಮಿತ್ರವಿಂದನ ಹೆಸರಿಗೆ ಬಂತು. ಮೂರು ಸಾರಿ ಚೀಟಿ ಹಾಕಲು ಮೂರು ಬಾರಿಯೂ ಮಿತ್ರವಿಂದ ನಿಗೇ ಬಂತು.

"ನಿನ್ನೊಬ್ಬನಿಂದ ನಾವೆಲ್ಲ ಪ್ರಮಾದಕ್ಕೆ ಗುರಿಯಾಗಬೇಕಾಗಿದೆ. ಒಬ್ಬನಿಗಾಗಿ ಇಷ್ಟು ಜನ ಸಾಯುವುದು ಹೆಡ್ಡತನ. ಆದುದರಿಂದ ನೀನು ಹಡಗಿನಿಂದ ಇಳಿದುಬಿಡು" ಎಂದು ನಾವಿಕರು ಮಿತ್ರವಿಂದನೊಂದಿಗೆ ಹೇಳಿದರು.



ಅವರು ಅವನಿಗೆ ಒಂದು ದೋಣಿಯನ್ನು ಕೊಟ್ಟು, ಅದರಲ್ಲಿ ಅವನನ್ನು ಕೂರಿಸಿ ಸಮುದ್ರಕ್ಕಿಳಿಸಿ ಬಿಟ್ಟುಬಿಟ್ಟರು. ಮರುಕ್ಷಣವೇ ಹಡಗು ತೀವ್ರವೇಗದಿಂದ ಹೊರಟು ಕಣ್ಮರೆಯಾಗಿ ಹೋಯಿತು.

ಮಿತ್ರವಿಂದನು ಹಾಗೆ ಹೋಗಿ ಹೋಗಿ ಒಂದು ದ್ವೀಪವನ್ನು ಸೇರಿದನು. ಅಲ್ಲಿ ಅವನಿಗೊಂದು ಅಮೃತಶಿಲಾಭವನ ಕಾಣಿಸಿತು. ಅದರಲ್ಲಿ ನಾಲ್ಕು ಹೆಣ್ಣು ಪಿಶಾಚಿಗಳು ವಾಸವಾಗಿದ್ದುವು. ಆ ಪಿಶಾಚಿಗಳು ಒಂದುವಾರ ಅತಿ ಉಲ್ಲಾಸದಿಂದ ಕಾಲಕಳೆಯುವುವು. ಮತ್ತೊಂದು ವಾರ ತಮ್ಮ ಪ್ರಾಯಶ್ಚಿತ್ತಕ್ಕಾಗಿ ಕಠೋರ ವ್ರತಗಳನ್ನು ಪಾಲಿಸುವುವು. ಮಿತ್ರವಿಂದನು ಆ ಪಿಶಾಚಿಗಳ ನಡುವೆ ಒಂದು ವಾರ ಇಂದ್ರ ವೈಭೋಗಗಳನ್ನು ಅನುಭವಿಸಿದನು. ಪಿಶಾಚಿಗಳು ನಿಯಮದಂತೆ ನೇಮವಾಚರಿಸಲು ಪ್ರಾರಂಭಿಸಿದಕೂಡಲೇ ಅವನಿಗೆ ಅಲ್ಲಿರಲು ಮನ ಒಡಂಬಡಲಿಲ್ಲ. ಅವನು ತನ್ನ ದೋಣಿಯಲ್ಲಿ ಕುಳಿತು ಮತ್ತೆ ಹೊರಟನು.

ಅವನು ಸಮುದ್ರದಮೇಲೆ ಹಾಗೇ ಹೋಗುತ್ತಿರಲು ಅವನಿಗೆ ಮತ್ತೊಂದು ದ್ವೀಪ ಸಿಕ್ಕಿತು. ಅಲ್ಲಿ ಎಂಟು ಪಿಶಾಚಿಗಳಿದ್ದುವು. ಮಿತ್ರವಿಂದನು ಅವುಗಳೊಂದಿಗೆ ಒಂದು ವಾರ ಕಳೆದನು. ಅವು ಸಹ ಕಠೋರ ವ್ರತಗಳನ್ನು ಆಚರಿಸಲು ಆರಂಭಿಸಿದಕೂಡಲೇ ಮತ್ತೆ ಪ್ರಯಾಣ ಹೊರಟನು.

ಈ ರೀತಿ ಅವನು ಮತ್ತೊಂದು ದ್ವೀಪದಲ್ಲಿ ಹದಿನಾರು ಪಿಶಾಚಿಗಳೊಂದಿಗೂ, ಮಗದೊಂದು ದ್ವೀಪದಲ್ಲಿ ಮುವತ್ತೆರಡು ಪಿಶಾಚಿಗಳೊಂದಿಗೂ



ಒಂದೊಂದು ವಾರ ಕಳೆದನು. ನಂತರ ಯಥಾ ಪ್ರಕಾರ ಪ್ರಯಾಣಹೊರಟು ಬೇರೊಂದು ದ್ವೀಪವನ್ನು ಸೇರಿಕೊಂಡನು.

ಆ ದ್ವೀಪದಲ್ಲಿ ಒಂದು ದೊಡ್ಡ ನಗರವಿತ್ತು. ಅದರ ಸುತ್ತಲೂ ಗೋಡೆ. ಆ ಗೋಡೆಗೆ ನಾಲ್ಕು ದ್ವಾರಗಳಿದ್ದುವು. ಅದು ನರಕ. ಆದರೆ ಮಿತ್ರವಿಂದನಿಗೆ ಅದು ನರಕದಂತೆ ಕಾಣಿಸಲಿಲ್ಲ. ಅಂದವಾದ ಮಹಲಿನಂತೆ ಕಂಗೊಳಿಸಿತು.

'ನಾನು ಈ ದ್ವೀಪವನ್ನು ಪ್ರವೇಶಿಸಿ ಅದರ ರಾಜನಾಗುವೆನು' ಎಂದುಕೊಂಡ.

ಆ ನಗರದಲ್ಲಿ ಒಂದುಕಡೆ ಮಿತ್ರವಿಂದನಿಗೆ ಒಬ್ಬ ಮನುಷ್ಯ ಕಾಣಿಸಿದ. ಅವನು ತನ್ನ ತಲೆಯಮೇಲೆ ಒಂದು ಚಕ್ರವನ್ನು ಧರಿಸಿದ್ದನು. ಅದರ ಅಂಚು ತುಂಬಾ ಹರಿತವಾಗಿತ್ತು. ಅದು ಕ್ರಮೇಣ ಅವನ ತಲೆಯೊಳಕ್ಕಿಳಿದು, ತಲೆಯಿಂದ ರಕ್ತ ಧಾರಾಕಾರವಾಗಿ ಸುರಿಯುತಿತ್ತು. ಅವನನ್ನು ಐದೆಳೆ ಸರಪಣಿಯಿಂದ ಬಿಗಿದಿದ್ದರು. ದೇಹವೆಲ್ಲಾ ರಕ್ತದಿಂದ ನೆನೆದು ಅವನು ನೋವಿನಿಂದ ನರಳಾಡುತ್ತಿದ್ದನು.

ಮಿತ್ರವಿಂದನು ಇದೆಲ್ಲವನ್ನು ನೋಡಿದರೂ ಸಹ ಆ ವ್ಯಕ್ತಿ ಆ ನಗರದ ರಾಜನಿರಬೇಕೆಂದು ಭ್ರಮೆಗೊಂಡನು. ಹರಿತವಾದ ಚಕ್ರ ಮಿತ್ರವಿಂದನ ಕಣ್ಣಿಗೆ ಪದ್ಮದಂತೆ ಕಾಣಿಸಿತು. ಅವನ ಮೈಮೇಲಿದ್ದ ಸರಪಳಿ ಒಂದು ಭೂಷಣದಂತೆ ತೋರಿತು. ಅವನ ನರಳಾಟ ಗಂಧರ್ವಗಾನದಂತೆ ಕೇಳಿಸಿತು.

ಮಿತ್ರವಿಂದನು ನರಕವಾಸಿಯನ್ನು ಸಮೀಪಿಸಿ "ಅಯ್ಯಾ, ತಾವು ಬಹಳ ಹೊತ್ತಿನಿಂದ



ಈ ಪದ್ಮವನ್ನು ಶಿರಸ್ಸಿನಮೇಲೆ ಧರಿಸಿರುವಿರಿ. ನಾನೂ ಸ್ವಲ್ಪಹೊತ್ತು ಧರಿಸಲು ಅವಕಾಶ ಕೊಡಿ" ಎಂದನು.

"ತಮ್ಮಾ, ಇದು ಪದ್ಮವಲ್ಲ, ಅಸಿಧಾರಾ ಚಕ್ರ" ಎಂದ ನರಕವಾಸಿ.

"ನೋಡಿದೆಯಾ, ನಿನ್ನ ಬುದ್ಧಿ. ನನಗೆ ಕೊಡಲಿಷ್ಟವಿಲ್ಲದೆ ಈ ರೀತಿ ಹೇಳುತ್ತಿರುವೆ" ಎಂದು ನಿಷ್ಠುರವಾಗಿ ನುಡಿದ ಮಿತ್ರವಿಂದ.

'ಇಂದಿಗೆ ನನ್ನ ಪಾಪ ಪರಿಹಾರವಾದಂತೆ ತೋರುವುದು. ಇವನೂಸಹ ನನ್ನಂತೆ ತಾಯಿಯನ್ನು ಹೊಡೆದುಬಡಿದಿರಬೇಕು. ಪಾಪದ ಫಲವನ್ನು ಅನುಭವಿಸಲು ಇಲ್ಲಿಗೆ ಬಂದಿದ್ದಾನೆ' ಎಂದುಕೊಂಡು ಆ ವ್ಯಕ್ತಿ ಅಸಿಧಾರಾ ಚಕ್ರವನ್ನು ಮಿತ್ರವಿಂದನ ತಲೆಯಮೇಲಿಟ್ಟು ತಾನು ತಪ್ಪಿಕೊಂಡನು.

ಸ್ವರ್ಗದಲ್ಲಿ ಇಂದ್ರನಾಗಿದ್ದ ಬೋಧಿಸತ್ವನು ದೇವಗಣಗಳ ಸಂಗಡ ನರಕವನ್ನು ಪರಿಶೀಲಿಸುತ್ತಾ ಮಿತ್ರವಿಂದನಿದ್ದಲ್ಲಿಗೆ ಬಂದನು.

ಆತನನ್ನು ಕಂಡಕೂಡಲೇ ಮಿತ್ರವಿಂದನು "ಮಹಾಪ್ರಭೂ, ಈ ಚಕ್ರದ ಹಾವಳಿಯಿಂದ ನಾನೆಂದು ಮುಕ್ತನಾಗುವೆನೋ ಹೇಳಬೇಕು" ಎಂದು ಕೇಳಿದನು. ಅದಕ್ಕೆ ಇಂದ್ರನು ಈ ರೀತಿ ಉತ್ತರ ಕೊಟ್ಟನು.

"ಎಲಾ, ನಿನ್ನಬಳಿ ಯಥೇಚ್ಛವಾಗಿ ಹಣವಿದ್ದರೂ ಸಹ ಇನ್ನೂ ಬೇಕು ಮತ್ತೂ ಬೇಕು ಎಂದು ದುರಾಶೆಪಟ್ಟೆ. ನಿನ್ನ ಆಶೆಗೆ ಮಿತಿಯೇ ಇಲ್ಲ. ನೀನು ಪಿಶಾಚಿಗಳೊಂದಿಗೆ ಉಲ್ಲಾಸದಿಂದ ಕಾಲಕ್ಷೇಪಮಾಡಿದ ಧೂರ್ತ. ನಿನಗೆ ಮಾನವರ ಉತ್ತಮ ಮಾರ್ಗವಾಗಲಿ, ಉದಾತ್ತ ಧ್ಯೇಯಗಳಾಗಲಿ ಸರಿತೋರಲಿಲ್ಲ. ಇತರರು ನಿನ್ನ ಮೇಲ್ಮೆಯನ್ನು ಕೋರಿ ಬುದ್ಧಿವಾದ ಹೇಳಿದರೂ ಕಿವಿಯಮೇಲೆ ಹಾಕಿಕೊಳ್ಳಲಿಲ್ಲ. ಈ ಚಕ್ರವನ್ನು ಕೋರಿ ಕೋರಿ ನೀನಾಗಿ ಪಡೆದೆ. ನಿನ್ನ ಜೀವಿತಾಂತದ ವರೆವಿಗೂ ಈ ಚಕ್ರ ನಿನ್ನನ್ನು ಬಿಡುವುದಿಲ್ಲ."

ಈ ರೀತಿ ಹೇಳಿ ಇಂದ್ರನು ತನ್ನ ಪರಿವಾರದೊಂದಿಗೆ ಅಲ್ಲಿಂದ ಹೊರಟುಹೋದನು. ಮಿತ್ರವಿಂದನು ಮಾಡಿದುದನ್ನೆಲ್ಲಾ ನೆನೆದು ಚಿಂತಿಸುತ್ತಾ ಪಾರಾಗಲು ಉಪಾಯವಿಲ್ಲದೆ ನೋವಿನಿಂದ ನರಳುತ್ತಿದ್ದನು.






## 4

ಪದ್ಮಪಾದನು ಪಿಂಗಳನನ್ನು ತನ್ನೊಂದಿಗೆ ಭಲ್ಲೂಕಪರ್ವತಕ್ಕೆ ಬರುವಂತೆ ಕೋರಿದನು. ಪಿಂಗಳನು ಅಂಗೀಕರಿಸಿದನು. ಕೊಂಚದೂರ ಪ್ರಯಾಣವಾದ ನಂತರ, ಪಿಂಗಳನು ಸ್ನಾನಮಾಡಲು, ಅಡವಿಯಲ್ಲಿದ್ದ ಒಂದು ಕೊಳದಬಳಿಗೆ ಹೋದನು. ಅಲ್ಲಿ ಬಂಧಿತನಾಗಿದ್ದ ಭಲ್ಲೂಕಕೇತುವೆಂಬುವನು, ತನಗೆ ಸಹಾಯ ಮಾಡಬೇಕೆಂದು ಪಿಂಗಳನನ್ನು ಕೋರಿದನು. ಆಗ ಹಿಂದಿನಿಂದ ಪದ್ಮಪಾದನು ಪಿಂಗಳನ ಹೆಸರುಹಿಡಿದು ಕೂಗಿದನು.]

ಪದ್ಮಪಾದನ ಕಂಠವನ್ನು ಕೇಳಿ ಪಿಂಗಳನು ಬೆದರಿ ಹಿಂತಿರುಗಿ ನೋಡಿದನು. ಆಗ ಅವನ ಕೈಯಲ್ಲಿದ್ದ ಬಂಡೆ ಜಾರಿ ಕೊಳದಲ್ಲಿ ಉರುಳಿ ಬಿದ್ದು ಭೋಳೋಂ ಎಂದು ಭಾರಿ ಸದ್ದಾಯಿತು. ಆ ಸದ್ದು ನಾಲ್ಕುದಿಕ್ಕೂ ಪ್ರತಿಧ್ವನಿಸಿ, ಅದನ್ನು ಕೇಳಿ ಪಿಂಗಳ ಮತ್ತೊಮ್ಮೆ ಹೆದರಿದನು.

"ಪಿಂಗಳಾ, ಆತನು ಯಾರು ಗೊತ್ತೇ?" ಎಂದು ಪದ್ಮಪಾದನು ಕೇಳುತ್ತಾ ಪಿಂಗಳನ ಸಮೀಪ ಬಂದನು. ಪಿಂಗಳನು ಒಂದುಸಾರಿ ಭಲ್ಲೂಕಕೇತನಕಡೆ ದೃಷ್ಟಿ ಹರಿಯಿಸಿ, ತುಸು ಲಜ್ಜೆಯಿಂದ ಮಾತಾಡದೆ ತಲೆತಗ್ಗಿಸಿಕೊಂಡನು. ಭಲ್ಲೂಕಕೇತನು ಪದ್ಮಪಾದನಕಡೆ ಸಂಶಯದಿಂದ ನೋಡುತ್ತಾ "ಸ್ವಾಮಿ, ತಾವು ಯಾರು? ಪುಣ್ಯಕಾರ್ಯ ಮಾಡಲಿದ್ದ ಆ ಯುವಕನನ್ನೇಕೆ ತಡೆಯುವಿರಿ? ದಯಮಾಡಿ ತಡೆ ತೋರಿಸಬೇಡಿ" ಎಂದು ಕೇಳಿದ.

"ಅಹ್ಹಹ್ಹಾ, ಪುಣ್ಯಕಾರ್ಯ!" ಎಂದು ಪದ್ಮಪಾದನು ಗಹಗಹಿಸಿ ನಗುತ್ತಾ "ನೀನು ಯಾರೆಂಬುದು ನನಗೆ ಗೊತ್ತಿಲ್ಲವೆಂದು ಭಾವಿಸಬೇಡ. ನಾನು ನಿನ್ನ ಪೂರ್ವೋತ್ತರಗಳನ್ನೆಲ್ಲಾ





ಬಲ್ಲೆ. ನನ್ನಲ್ಲಿ ನಿನ್ನಬೇಳಿಬೇಯದು" ಎಂದನು. ಭಲ್ಲೂಕಕೇತನು ಅದಕ್ಕೆ ಉತ್ತರ ಕೊಡು ವಷ್ಟರಲ್ಲಿ ಪಿಂಗಳನು "ಈತನ ಹೆಸರು ಭಲ್ಲೂಕ ಕೇತ. ಒಂದಾನೊಂದು ಕಾಲದಲ್ಲಿ ಈತ ನಾವು ಈಗ ಹೋಗಲಿರುವ ಪರ್ವತಗಳ ಅಧಿಪತಿ ಯಾಗಿದ್ದನಂತೆ. ತನ್ನನ್ನು ಬಿಡುಗಡೆ ಮಾಡಿದರೆ ತುಂಬಾ ಉಪಕಾರ ಮಾಡುತ್ತಾನಂತೆ. ಒಬ್ಬ ಮಾಂತ್ರಿಕನ ಪ್ರಭಾವದಿಂದ ತನಗೆ ಈ ಬಗೆಯ ದುಸ್ಥಿತಿ ಒದಗಿತೆಂದು ಹೇಳಿದನು" ಎಂದನು.

"ಹೌದು ನನಗೆ ತಿಳಿದಿದೆ. ಆ ಮಾಂತ್ರಿಕ ನಿಂದಲೇ ಈತನಿಗೆ ಈ ಸ್ಥಿತಿ ಬಂತು. ಸತ್ಯವೇ ಹೇಳಿದ್ದಾನೆ. ಆ ಮಾಂತ್ರಿಕನು ಯಾರೋ ನಿನಗೆ ಗೊತ್ತೇ ಪಿಂಗಳಾ?" ಎಂದು ಕೇಳಿದ ಪದ್ಮಪಾದ. ತನಗೆ ತಿಳಿಯದೆಂದು ಪಿಂಗಳನು ತಲೆಯಾಡಿಸಿದನು. "ಹಾಗಾದರೆ ಕೇಳು. ಈ ಭಲ್ಲೂಕಕೇತನನ್ನು ಹಿಡಿದು ಬಂಧಿಸಿದಾತ ಮತ್ತೆ ಯಾರೂ ಅಲ್ಲ; ಮಹಾಮಾಂತ್ರಿಕ ಶ್ರೇಷ್ಠನಾದ ಮಹಾಮಾಯ" ಎಂದು ಹೇಳಿ ಪದ್ಮಪಾದನು ಭಲ್ಲೂಕಕೇತನಕಡೆ ದುರುಗುಟ್ಟಿ ಕೊಂಡು ನೋಡಿದನು ತಲೆಯಾಡಿಸುತ್ತಾ.

ಭಲ್ಲೂಕಕೇತನು ಆ ಮಾತನ್ನು ಕೇಳಿದ ಕೂಡಲೇ ಹಲ್ಲು ಕಟಕಟನೆ ಕಡಿಯುತ್ತಾ "ಓಹೋ! ಎಲ್ಲಾ ನಿನಗೆ ಗೊತ್ತಾಗಿದೆಯೋ? ನೀನು ಯಾರು? ನನ್ನ ವಿಷಯ ನಿನಗೆ ಹೇಗೆ ಗೊತ್ತಾಯಿತು? ಮಹಾಮಾಯನ ಸಂಗತಿ ನಿನಗೆ ಯಾರು ಹೇಳಿದರು? ನೀನೂ ಒಬ್ಬ ಮಾಂತ್ರಿಕನೋ?" ಎಂದು ಗರ್ಜನೆಯ ದನಿಯಿಂದ ಕೇಳಿದ.

"ಹೌದು. ಓ! ಭಲ್ಲೂಕಕೇತುವೇ! ನಿನ್ನ ಊಹೆ ನಿಜ. ನಾನೂ ಒಬ್ಬ ಮಾಂತ್ರಿಕ. ನನ್ನ ಹೆಸರು ಪದ್ಮಪಾದ. ಮಹಾ ಬಲಶಾಲಿಯೂ, ತಂತ್ರಿಯೂ ಆದ ನಿನ್ನನ್ನು ಜಯಿಸಿ, ಬಂಧಿ ಸಿದ ಮಹಾಮಾಯನ ಆ ಸಮಾಧಿಯಮೇಲೆ ಧಾಳಿಮಾಡಲು ಹೋಗುತ್ತಿದ್ದೇನೆ" ಎಂದು ಗಂಭೀರವಾಗಿ ನುಡಿದ ಪದ್ಮಪಾದ.

"ಹಾಂ. ನಿಜವೇ. ಮಹಾಮಾಯನ ಸಮಾಧಿ ಯನ್ನು ಧಾಳಿಮಾಡಲು ಹೋಗುತ್ತಿರುವಿರಾ? ಹಾಗಾದರೆ ನೀವು ಮಹಾಮಾಂತ್ರಿಕರಿರಲೇ ಬೇಕು. ಹಾಗಿದ್ದರೆ ಮಹಾಮಾಯನ ಶತ್ರುವಾದ ನನ್ನ ಸಹಾಯ ನಿಮಗೆ ಅನುಕೂಲವಾಗ ಬಹುದು. ನನ್ನನ್ನು ಬಂಧನದಿಂದ ಬಿಡುಗಡೆ









ಮಾಡಿ. ನಿಮ್ಮ ಸೇವೆಯನ್ನು ಮಾಡಿಕೊಂಡಿರುತ್ತೇನೆ" ಎಂದ ಭಲ್ಲೂಕೇತು.

"ನಿನ್ನ ಈ ಬರುಡೆಮಾತುಗಳನ್ನು ನಂಬಿ ಮೋಸಹೋಗುವಂತಹ ಪೆದ್ದ ನಾನಲ್ಲ ತಿಳಿಯಿತೆ?" ಎಂದ ಪದ್ಮಪಾದ.

ಪಿಂಗಳನು ಪದ್ಮಪಾದನನ್ನು ಸಮೀಪಿಸಿ "ಪದ್ಮಪಾದ, ನೀವು ಈತನಿಗೆ ಸಹಾಯ ಮಾಡುವುದರಿಂದ ಪ್ರಯೋಜನವುಂಟೆಂದು ಭಾವಿಸುವೆನು. ಏಕೆಂದರೆ ಈತ ಇನ್ನೊಂದು ವಿಷಯ ಕೂಡಾ ಹೇಳಿದ್ದಾನೆ. ಆಡಿದಮಾತಿಗೆ ತಪ್ಪಿದರೆ ಆತನ ತಲೆ ಸೀಳಿಹೋಗುವುದಾಗಿ ಯಾರೋ ಶಾಪ ಕೊಟ್ಟಿರುವರಂತೆ" ಎಂದ.

"ಆ ಪೊಳ್ಳು ಮಾತುಗಳನ್ನು ನಂಬಿ ನೀನು ಆಪತ್ತಿನಲ್ಲಿ ಸಿಲುಕಲು ಸಿದ್ಧನಾದಂತೆ ತೋರುವುದು. ಒಳ್ಳೇವೇಳೆ! ನಾನು ಬರುವುದು ಸ್ವಲ್ಪ ಮಾತ್ರ ತಡವಾದರೂ ಕೆಲಸ ಕೈಮೀರಿ ಹೋಗುತಿತ್ತು. ಮಹಾಮಾಯನ ಮಂತ್ರಶಕ್ತಿಯುಳ್ಳ ವಸ್ತುಗಳು ನಮ್ಮ ಕರಗತವಾಗುವ ಮೊದಲೇ ಭಲ್ಲೂಕಕೇತನನ್ನು ಸೆರೆಯಿಂದ ಬಿಡಿಸಿದರೆ ಪ್ರಮಾದವಾದೀತು. ಆ ವಸ್ತುಗಳನ್ನು ನಮ್ಮ ವಶಪಡಿಸಿಕೊಂಡನಂತರ ಇವನನ್ನು ನಮ್ಮ ಸೇವಕನನ್ನಾಗಿ ಮಾಡಿಕೊಳ್ಳಬಹುದು" ಎಂದ ಪದ್ಮಪಾದ.

"ಹಾಗಾದರೆ ಸ್ವಾಮಿ...." ಎಂದು ಭಲ್ಲೂಕಕೇತನು ಏನೋ ಹೇಳುತ್ತಿರಲು ಪದ್ಮಪಾದನು ಅವನನ್ನು ತಡೆದು, "ಭಲ್ಲೂಕ, ಸುಮ್ಮನೇ ಬಾಯಿಮುಚ್ಚಿರು ನಿನ್ನ ಮರಳು ಮಾತುಗಳಿಂದ ನನ್ನನ್ನು ಮೋಸಗೊಳಿಸಲಾರೆ! ನನ್ನನ್ನು ಸಾಮಾನ್ಯರ ಲೆಕ್ಕದಲ್ಲಿ ಎಣಿಸಿಬಿಡಬೇಡ. ನಾನು ಮಹಾಮಾಯನ ಸಮಾಧಿಯಿರುವ ಪಾಳು ದೇಗುಳವನ್ನು ಪ್ರವೇಶಿಸಿದ ನಂತರ ನಿನ್ನನ್ನು ಈ ಸೆರೆಯಿಂದ ತಪ್ಪಿಸುವೆನು. ಅಷ್ಟರವರೆವಿಗೆ ನೀನಿಲ್ಲೇ ಇರಬೇಕು" ಎಂದು ಅಲ್ಲಿಂದ ಹೊರಟು ನಡೆದನು. ಪಿಂಗಳನು ಅವನನ್ನು ಹಿಂಬಾಲಿಸಿದನು.

ಪದ್ಮಪಾದ ಪಿಂಗಳರು ಅಡವಿಯಿಂದ ಹೊರಬಂದರು. ಎದುರುಗಿದ್ದ ಹುಲ್ಲುಗಾವಲಿನಲ್ಲಿ ಅವರು ಬಿಟ್ಟಿದ್ದ ಕತ್ತೆಗಳಿರಲಿಲ್ಲ. ಪಿಂಗಳನು ಆಚ್ಚರಿಯಿಂದ ಸುತ್ತಲೂ ನೋಡಿ "ನಮ್ಮ ವಾಹನಗಳೆಲ್ಲಿ? ಅವು ಇಲ್ಲೇ ಎಲ್ಲೋ ಮೇಯುತ್ತಿರಬಹುದೆಂದು ಭಾವಿಸಿದ್ದೆ" ಎಂದ.



"ಪಿಂಗಳಾ, ಅವು ಕತ್ತೆಗಳ ರೂಪದಲ್ಲಿರುವ ಪಿಶಾಚಿಗಳೇ ಹೊರತು ನಿಜವಾದ ಕತ್ತೆಗಳಲ್ಲವಲ್ಲ! ಅವು ಹುಲ್ಲು ತಿಂದು ಜೀವಿಸುವುವೇ? ಆಹಾರ ಹುಡುಕಿಕೊಂಡು ಎಲ್ಲಿಗೋ ಹೊರಟವೆ. ನಾವೂಸಹ ಆಹಾರದಕಡೆ ಗಮನ ಕೊಡೋಣ. ನಿನಗೆ ಹಸಿವಾಗುವುದಿಲ್ಲವೇ? ನನಗೇನೋ ಹೊಟ್ಟೆಯಲ್ಲಿ ದೊಂಬರು ಕುಣಿಯುತ್ತಿರುವರು" ಎಂದು ಅಲ್ಲೇ ಒಂದುಕಡೆ ಕುಳಿತನು.

ಪಿಂಗಳನು ಅವನ ಮಗ್ಗುಲಲ್ಲಿ ಕುಳಿತು "ಹೌದು. ತುಂಬಾ ಹಸಿವಾಗುತ್ತಿದೆ. ಏನು ಮಾಡೋಣ? ನಮ್ಮಸಂಗಡ ಬುತ್ತಿ ಕಟ್ಟಿಕೊಂಡು ಬಂದಿದ್ದರೆ ಚೆನ್ನಾಗಿತ್ತು" ಎಂದು ತೀರಾ ಹತಾಶನಾಗಿ ನುಡಿದ. ಪದ್ಮಪಾದನು ಪಿಂಗಳನ ಸ್ಥಿತಿ ನೋಡಿ ನಸುನಕ್ಕು "ಪಿಂಗಳಾ, ನಿನಗೇನೂ ಗೊತ್ತಿಲ್ಲ. ಅಲ್ಲಿರುವ ಚೀಲವನ್ನು ಇತ್ತ ಕೊಡು" ಎಂದು ತುಸ ದೂರದಲ್ಲಿದ್ದ ಚೀಲದಕಡೆ ಬೆರಳು ತೋರಿಸಿದನು.

ಪಿಂಗಳನು ಚೀಲವನ್ನು ಆತುರದಿಂದ ತೆಗೆದುಕೊಂಡು ಅದರಲ್ಲಿ ಕೈಹಾಕಿ ನೋಡಲು ಅದು ಬರಿದಾಗಿತ್ತು. ಅವನ ಆಶೆಯೆಲ್ಲವೂ ನಿರಾಶೆಯಾಗಿ ಹೋಯಿತು.

ಪದ್ಮಪಾದನು ಚೀಲವನ್ನು ತೆಗೆದುಕೊಂಡು "ಪಿಂಗಳಾ, ನಿನಗೆಂಥ ಊಟ ಬೇಕು, ಎಷ್ಟು ಬಗೆಯ ಪದಾರ್ಥಗಳು ಬೇಕು? ಹೂಂ. ಹೇಳು ಹೇಳು" ಎಂದು ಕೇಳಿದ.

"ಎಷ್ಟು ಬಗೆಯ ಪದಾರ್ಥಗಳೇ! ಹಸಿವಿನಿಂದ ದಹಿಸಿಹೋಗುತ್ತಿರುವ ಹೊಟ್ಟೆಗೊಂದಿಷ್ಟು ಅನ್ನ, ಸಾರು ಸಾಲದೆ! ಆ ಚೀಲದಲ್ಲೇನಿದೆ. ಬರೀಚೀಲ" ಎಂದು ಉದಾಸೀನತೆಯಿಂದ ನುಡಿದ ಪಿಂಗಳ.

ಪದ್ಮಪಾದನು ಚೀಲವನ್ನು ಬಿಚ್ಚಿ ಅದರಲ್ಲೊಂದುಸಾರಿ ತಲೆಹಾಕಿ ಯಾವುದೋ ಮಂತ್ರವನ್ನು ಮಣಮಣನೆ ಹೇಳಿ "ಪಿಂಗಳಾ, ಈಗ ನೋಡು" ಎಂದು ಚೀಲವನ್ನು ಪಿಂಗಳನ ಮುಂದಿಟ್ಟನು.

ಪಿಂಗಳನು ಆತುರದಿಂದ ಚೀಲದಲ್ಲಿ ಕೈಹಾಕಲು ಅವನ ಕೈಗೆ ಬಿಸಿಯಾಗಿರುವ ಪಾತ್ರೆಯೊಂದು ಸಿಕ್ಕಿತು. ಅದನ್ನು ಹೊರಗೆ ತೆಗೆದನು. ಅದರಲ್ಲಿ ಬಿಸಿಬಿಸಿಯಾಗಿ ಆವಿ ಬರುತ್ತಿದ್ದ ಅನ್ನವಿತ್ತು. ಅವನು ಆಶ್ಚರ್ಯದಿಂದ ಪದ್ಮಪಾದನಕಡೆ ನೋಡಿದನು.





ಪದ್ಮಪಾದನು "ನಿನಗೆ ಬೇಕಾದ ಬಗೆ ಬಗೆಯ ಪದಾರ್ಥಗಳಿವೆ. ಅವನ್ನೂ ಹೊರಗೆ ತೆಗೆ" ಎಂದನು. ಹತ್ತು ನಿಮಿಷಗಳಲ್ಲಿ ಪಿಂಗಳನು ಚೀಲದಿಂದ ಸುಮಾರು ಇಪ್ಪತ್ತೈದು ಬಗೆಯ ಪದಾರ್ಥಗಳನ್ನು, ಪಾಯಸವನ್ನೂ ಹೊರಗೆ ತೆಗೆದನು. ಅವರಿಬ್ಬರೂ ಹೊಟ್ಟೆ ತುಂಬಾ ತಿಂದು ತೇಗುಬಿಟ್ಟರು. ಅನಂತರ ಸ್ವಲ್ಪಹೊತ್ತು ವಿಶ್ರಾಂತಿ ಪಡೆದು, ಮತ್ತೆ ಪ್ರಯಾಣಕ್ಕೆ ಸಿದ್ಧರಾದರು.

ಪಿಂಗಳನು ಕತ್ತೆಗಾಗಿ ಅತ್ತಿತ್ತ ನೋಡುವಾಗ ಪದ್ಮಪಾದನು ಒಂದು ಚಿಟಿಕೆ ಮಣ್ಣನ್ನು ತೆಗೆದು ಮಂತ್ರಿಸಿ, ನೆಲದಮೇಲೆಸೆದನು. ಕೂಡಲೇ ಭೂಮಿ ಇಬ್ಭಾಗವಾಗಿ ಬಿರಿದು ಕತ್ತೆಯ ರೂಪದಲ್ಲಿದ್ದ ಪಿಶಾಚಿಗಳು ಭೀಕರವಾಗಿ ಅರಚುತ್ತಾ ಮೇಲೆ ಬಂದುವು. ಪದ್ಮಪಾದ ಪಿಂಗಳರು ತಲಾ ಒಂದೊಂದು ಕತ್ತೆಯಮೇಲೆ ಕುಳಿತು ಭಲ್ಲೂಕ ಪರ್ವತದಕಡೆ ಹೊರಟರು.

ಎರಡು ಮೂರು ಗಂಟೆ ಪ್ರಯಾಣಮಾಡಿದ ನಂತರ ದೂರದಲ್ಲಿ ಒಂದುಕಡೆ ಕಪ್ಪನೆಯ ಹೊಗೆ ಕವಿಯುತ್ತಿರುವಂತೆ ಕಾಣಿಸಿತು. ಪಿಂಗಳನು ಸಂಶಯದಿಂದ ಪದ್ಮಪಾದನಿಗೆ ಅದನ್ನು ತೋರಿಸಿ "ಅಲ್ಲಿ ಕಾಣಿಸುತ್ತಿರುವುದೇನೋ? ಅದು ಮೋಡವೇ ಅಥವಾ ಕಾಡುಗಿಚ್ಚಿನ ಹೊಗೆಯೇ?" ಎಂದು ಕೇಳಿದನು.

ಪದ್ಮಪಾದನು ಸ್ವಲ್ಪಹೊತ್ತು ಅದನ್ನೇ ದೃಷ್ಟಿಸಿ ನೋಡಿ "ಪಿಂಗಳಾ, ಅದು ಮೋಡವೂ ಅಲ್ಲ, ಹೊಗೆಯೂ ಅಲ್ಲ. ಭಲ್ಲೂಕಪರ್ವತಗಳನ್ನು ಕಾವಲುಕಾಯುತ್ತಿರುವ ರಾಕ್ಷಸಗಣ. ಬಹುಶಃ ನಾವು ಬರುತ್ತಿರುವ ಸಂಗತಿ ಅವುಗಳಿಗೆ ತಿಳಿದಿರಬೇಕು. ಅವು ನಮ್ಮನ್ನು ಹೆದರಿಸಲು ಪ್ರಯತ್ನಿಸುತ್ತಿರಬೇಕು. ಇನ್ನು ನಾವು ಜಾಗರೂಕರಾಗಿರಬೇಕು" ಎಂದ.

ಪದ್ಮಪಾದನು ಮಾತು ಮುಗಿಸುವಮುನ್ನ ಸುಮಾರು ಐವತ್ತು ಗಜ ದೂರದಲ್ಲಿ ಮೇಘದಂತೆ ಕಪ್ಪನೆಯ ಹೊಗೆ ತಾಳೆಮರದಷ್ಟು ಎತ್ತರ ಮೇಲೇರಿತು. ಪಿಂಗಳನು ಭಯದಿಂದ ಕಂಪಿಸಿದನು. ತನ್ನ ಕಣ್ಣುಗಳನ್ನು ಗಟ್ಟಿಯಾಗಿ ಮುಚ್ಚಿಕೊಂಡನು. ಪದ್ಮಪಾದನು ಮಂತ್ರವನ್ನು ಉಚ್ಚರಿಸಿ ತಾನು ಹತ್ತಿದ್ದ ಕತ್ತೆಯನ್ನು ಅತ್ತಕಡೆ ಓಡಿಸಿದನು. ಮರುಕ್ಷಣವೇ ಆ ಭಯಂಕರವಾದ ಹೊಗೆ ಮಾಯವಾಯಿತು.



ಪದ್ಮಪಾದನು ಪಿಂಗಳನಕಡೆ ತಿರುಗಿ "ಪಿಂಗಳಾ, ಭಯಪಡಬೇಡ. ನಿನ್ನ ರಕ್ಷಣೆಗಾಗಿ ಈ ಖಡ್ಗವನ್ನು ಕೊಡುತ್ತೇನೆ, ಹಿಡಿ. ರಾಕ್ಷಸರು ಯಾವ ರೂಪದಿಂದ ಬಂದರೂ ನೀನು ಅವರನ್ನು ಸಂಹರಿಸಬಹುದು" ಎಂದು ಹೇಳಿ ಖಡ್ಗವನ್ನು ಕೊಡುತ್ತಿರಲು, ಅವರಿಬ್ಬರ ಮಧ್ಯೆಯಿದ್ದ ಭೂಮಿ ಬಿರುಕುಬಿಟ್ಟಿತು. ಪದ್ಮಪಾದ ಪಿಂಗಳರು ಏರಿದ್ದ ಕತ್ತೆಗಳು ಒಂದೊಂದು ಪಕ್ಕಕ್ಕೆ ಹಾರಿದುವು. ಮರುಕ್ಷಣವೇ ಮಾರುದ್ದ ದಂತಗಳಿಂದ, ಜಡೆಗಳು ಹೆಣೆದುಕೊಂಡಿದ್ದ ಶರೀರದ ಒಂದು ಆನೆ ಘೀಂಕರಿಸುತ್ತ ಪಿಂಗಳನಮೇಲೆ ಹಾರಿತು. ಪಿಂಗಳನು ಕೆಚ್ಚೆದೆಯಿಂದ ತನ್ನ ಖಡ್ಗವನ್ನು ಹಿಡಿದು ಆನೆಯಮೇಲೆ ನುಗ್ಗಿದನು. ಕೂಡಲೇ ಆನೆ ನೋವಿನಿಂದ ನರಳುತ್ತ ಕಪ್ಪನೆಯ ಹೊಗೆಯಾಗಿ ದೂರ ಹೊರಟುಬಿಟ್ಟಿತು.

"ಭೇಷ್, ಪಿಂಗಳಾ. ಧೈರ್ಯವೆಂದರೆ ಅದು. ಏಟಿಗೆ ಏಟು ಎಂಬ ಗಾದೆ ಸುಳ್ಳಲ್ಲ. ನಿಜವಾಗಿಯೂ ನಾನು ನಿನಗೆ ಕೊಟ್ಟ ಖಡ್ಗದಲ್ಲಿ ಯಾವ ಮಂತ್ರಶಕ್ತಿಯೂ ಇಲ್ಲ. ಆದರೆ ಮೊದಲೇ ನಾನು ಹಾಗೆಂದು ಹೇಳಿದ್ದರೆ ನೀನಿಷ್ಟು ಧೈರ್ಯವಾಗಿ ಆನೆಯನ್ನು ಇದಿರಿಸುತ್ತಿರಲಿಲ್ಲ. ಭೇಷ್ ಭೇಷ್! ಪಿಂಗಳಾ! ಧೈರ್ಯಶಾಲಿಗಳನ್ನು ಯಾರೂ ಬಗ್ಗುಬಡಿಯಲಾರರು" ಎಂದು ಹೊಗಳಿದ ಪದ್ಮಪಾದ.

ಪಿಂಗಳನು ತನ್ನ ಖಡ್ಗವನ್ನೊಮ್ಮೆ ಆಶ್ಚರ್ಯದಿಂದ ನೋಡಿ ಹೊಟ್ಟೆ ಹುಣ್ಣಾಗುವಂತೆ ನಕ್ಕು "ನಿಜವಾಗಿ ಈ ಖಡ್ಗದಲ್ಲಿ ಮಂತ್ರಶಕ್ತಿಯಿಲ್ಲವೇ? ಆದರೂ ಚಿಂತೆಯಿಲ್ಲ ಬಿಡು. ಇದ



ರಿಂದ ನಾನು ಸಾವಿರ ರಾಕ್ಷಸರು ಒಟ್ಟಿಗೆ ಬಂದರೂ ಎದುರಿಸಬಲ್ಲೆ. ಜೈ ಪಾತಾಳಭೂತ" ಎಂದು ಉತ್ಸಾಹದಿಂದ ಖಡ್ಗವನ್ನು ಗಾಳಿಯಲ್ಲಿ ಗಿರಗಿರನೆ ತಿರುಗಿಸಿದನು. ಈಗ ಅವನಿಗೂ ಎಲ್ಲಿಲ್ಲದ ಧೈರ್ಯ ಬಂದುಬಿಟ್ಟಿತು.

ಪಿಂಗಳನು ಪ್ರದರ್ಶಿಸಿದ ಧೈರ್ಯಸಾಹಸಗಳು ಪದ್ಮಪಾದನ ಮನಸ್ಸನ್ನಾಕರ್ಷಿಸಿತು. ಪಿಂಗಳನಕಡೆ ಮೆಚ್ಚಿಗೆಯಿಂದ ನೋಡುತ್ತಾ "ನಾವು ಭಲ್ಲೂಕಪರ್ವತಗಳನ್ನು ಸಮಿಾಪಿಸಿದೆವು. ನಮ್ಮ ಗಮ್ಯಸ್ಥಾನವಾದ ನದಿ ಈ ಪರ್ವತಗಳ ನಡುವೆ ಇರುವ ಕಣಿವೆಯಲ್ಲಿದೆ. ಕಾಲುನಡಿಗೆಯಿಂದ ಅಲ್ಲಿಗೆ ಹೋಗುವುದಂತೂ ಅಸಾಧ್ಯ ಮತ್ತು ಬಹಳ ಸಮಯ ಹಿಡಿಯುವುದು. ಆದರೂ ಪೇರುಗಳು, ಹಳ್ಳತಿಟ್ಟುಗಳು ಏರಿಳಿಯಲು ತುಂಬಾ ಕಷ್ಟ. ಈ ಗಾರ್ದಭಗಳನ್ನು ಬೆಟ್ಟಗಳಮೇಲೆ ಹಾರಿಸಿ, ನಿಧಾನವಾಗಿ ಆ ಕಣಿವೆಯಲ್ಲಿ ಇಳಿಯೋಣ" ಎಂದನು.

ಪಿಂಗಳನು ಅಂಗೀಕರಿಸಲು ಕತ್ತೆಗಳೆರಡೂ ಮೇಲೆ ಹಾರಿದುವು. ಅವು ಬೆಟ್ಟದ ಶಿಖರಗಳ ಮೇಲೆ ಹಾರುತ್ತಾ ಕ್ರಮೇಣ ಕಣಿವೆಯಲ್ಲಿದ್ದ ನದಿಯದಡವನ್ನು ಸೇರಿದುವು.

ಪದ್ಮಪಾದ ಪಿಂಗಳರು ತಮ್ಮ ವಾಹನಗಳಮೇಲಿಂದ ಇಳಿದರು. ಮರುಕ್ಷಣವೇ ಆ ಕತ್ತೆಗಳು ಮಾಯವಾದುವು.

ಪದ್ಮಪಾದನು ನದಿಯ ದಡದಲ್ಲಿ ಕುಳಿತು ಕೈಯಿಂದ ನೀರನ್ನು ಕದಕುತ್ತಾ ಯಾವುದೋ ಮಂತ್ರವನ್ನು ಹೇಳಲಾರಂಭಿಸಿದನು. ಕ್ರಮೇಣ ನದಿಯಲ್ಲಿ ಅಲೆಗಳೆದ್ದು ಮೊರೆಯುತ್ತಾ ನೋಡ



ಕವಿಯಿತು. ಪಿಂಗಳನು ಆ ದೃಶ್ಯವನ್ನು ನೋಡುತ್ತಾ ವಿಗ್ರಹದಂತೆ ನಿಂತುಬಿಟ್ಟನು. ಕೊಂಚಹೊತ್ತಿನನಂತರ ಪದ್ಮಪಾದನು ಎದ್ದು ನಿಂತು ಚೀಲದಲ್ಲಿದ್ದ ಗಾಜಿನ ಜಾಡಿಯನ್ನು ತರುವಂತೆ ಪಿಂಗಳನಿಗೆ ಹೇಳಿದನು. ಪಿಂಗಳನು ಅದೇಪ್ರಕಾರ ತಂದು ಮುಂದಿಟ್ಟನು. ಪದ್ಮಪಾದನು ಆ ಜಾಡಿಯಲ್ಲಿ ಮೊಸಳೆಯ ರೂಪದಲ್ಲಿದ್ದ ಮಹಾಮಾಯನ ಶಿಷ್ಯರಿಬ್ಬರಕಡೆ ತೀಕ್ಷ್ಣವಾಗಿ ನೋಡಿ, "ಇನ್ನಾದರೂ ನೀವು ನಿಮ್ಮ ನಿಜರೂಪವನ್ನು ಪಡೆಯುವಿರಾ, ಇಲ್ಲಾ ಸುಟ್ಟು ಬೂದಿಮಾಡಿ ನದಿಯಲ್ಲಿ ಕದಡಿ ಬಿಡಲೇ?" ಎಂದು ಹೂಂಕರಿಸಿದನು. ಕೂಡಲೇ ಗಾಜಿನಜಾಡಿ ಫಟಾರೆಂದು ಚೂರುಚೂರಾಗಿ ಒಡೆದು ಗಾಳಿಯಲ್ಲಿ ಹಾರಿಹೋಯಿತು.

ಕಪ್ಪನೆಯ ಇಬ್ಬರು ವಿಕೃತಾಕಾರರು ಪದ್ಮಪಾದನಿಗೆ ನಮಸ್ಕಾರಮಾಡಿ "ಮಹಾಮಾಂತ್ರಿಕನೇ, ನಾವು ನಿಮ್ಮ ದಾಸಾನುದಾಸರು. ಏನು ಮಾಡಬೇಕೋ ಅಪ್ಪಣೆ ಕೊಡಿ" ಎಂದರು.

"ಮಹಾಮಾಯನ ಸಮಾಧಿಯಿರುವ ಪಾಳುದೇಗುಲವನ್ನು ನಾವು ಪ್ರವೇಶಿಸುವೆವು. ಮೊದಲು ಈ ನದಿ ಬತ್ತಿಹೋಗಿ ನಮಗೆ ದಾರಿ ಬಿಡುವಂತೆ ಮಾಡಿ" ಎಂದು ಪದ್ಮಪಾದನು ಗಂಭೀರವಾಗಿ ಆಜ್ಞಾಪಿಸಿದನು.

ಮಹಾಮಾಯನ ಶಿಷ್ಯರು ಒಬ್ಬರನ್ನೊಬ್ಬರು ನೋಡಿ, ಜವಾಬು ಹೇಳಲು ಅನುಮಾನಿಸುತ್ತಿರಲು ಪದ್ಮಪಾದನು ಕಣ್ಣು ಕೆಂಪಗೆಮಾಡಿ "ನನ್ನ ಆಜ್ಞೆ ಕೇಳಿಸಿತೇ?" ಎಂದು ಪ್ರಶ್ನಿಸಿದನು. ಆಗ ಅವರಿಬ್ಬರು ಪದ್ಮಪಾದನಿಗೆ ನಮಸ್ಕಾರ ಮಾಡಿ "ಈ ನದಿ ಬತ್ತಿಹೋಗಿ ನಿಮಗೆ ದಾರಿ ಕೊಡಬೇಕಾಗಿದ್ದರೂ, ನೀವು ಮಹಾಮಾಯನ ಸಮಾಧಿಯನ್ನು ಸೇರಬೇಕಾಗಿದ್ದರೂ ಪಿಂಗಳನೆಂಬ ಜಾಲರಿ ಇಲ್ಲಿಗೆ ಬರಬೇಕು" ಎಂದರು.

"ಹಾಗೋ, ಈತನೇ ಪಿಂಗಳ. ಸರಿಯೇ" ಎಂದು ಪದ್ಮಪಾದನು ಪಿಂಗಳನಕಡೆ ಕೈಬೆರಳು ತೋರಿಸಿದನು.

ಆಗ ಮಹಾಮಾಯನ ಶಿಷ್ಯರು ಪಿಂಗಳನನ್ನು ನೋಡಿ ಅಚ್ಚರಿಗೊಂಡರು. "ಅಪ್ಪಣೆ. ನಿಮ್ಮ ಆಜ್ಞೆಯನ್ನು ಈಗಲೇ ನೆರವೇರಿಸುವೆವು" ಎಂದು ಕೂಡಲೇ ಅವರು ಅದೃಶ್ಯರಾದರು.

[ ಇನ್ನೂ ಇದೆ ]



# ಕಂಸಾಳಕ

ತ್ರಿವಿಕ್ರಮನು ಛಲದಿಂದ ಮರದಬಳಿಗೆ ಹೋಗಿ ಶವವನ್ನು ಕೆಳಕ್ಕಿಳಿಸಿ ಭುಜದಮೇಲೆ ಹಾಕಿಕೊಂಡು ಶ್ಮಶಾನದತ್ತ ನಡೆದನು. ಆಗ ಶವದಲ್ಲಿದ್ದ ಬೇತಾಳ "ರಾಜನೇ, ನೀನು ಮತ್ತೊಬ್ಬರಿಗಾಗಿ ಇಷ್ಟು ತಾಪತ್ರಯ ಪಡುತ್ತಿರುವೆ. ಆದರೆ ಈ ಪ್ರಪಂಚದಲ್ಲಿ ಕೃತಜ್ಞತೆಯೆನ್ನುವುದು ತೀರಾ ವಿರಳ. ನಮ್ಮಿಂದೇನಾದರೂ ತುಸ ಪೊರಪಾಟಲು ನಡೆದರೆ ಉಪಕಾರ ಹೊಂದಿದವರೂ ನಮಗೆ ಶತ್ರುಗಳಾಗುವರು. ಇದಕ್ಕೆ ಉದಾಹರಣೆಯಾಗಿ ನಿನಗೆ ಲೋಹಿತನ ಕಥೆ ಹೇಳುವೆನು" ಎಂದು ಹೀಗೆಂದು ಹೇಳಲಾರಂಭಿಸಿತು:

ವಲ್ಲಭೀಪುರ ವ್ಯಾಪಾರಕ್ಕೆ ಹೆಸರಾಗಿತ್ತು. ಅಲ್ಲಿ ಧರ್ಮಗುಪ್ತನೆಂಬ ಧನಿಕನಿದ್ದನು. ಎಲ್ಲಿಂದಲೋ ಧರ್ಮಗುಪ್ತನು ವಲ್ಲಭೀಪುರಕ್ಕೆ ವಲಸೆ ಬಂದಿದ್ದನು. ಅಲ್ಲಿ ಆತನಿಗೆ ಯಾರೂ ನೆಂಟರಿಷ್ಟರಿರಲಿಲ್ಲ. ಒಬ್ಬೊಂಟಿಗನಾಗಿ ಜೀವಿಸುತ್ತಾ, ವ್ಯಾಪಾರಿಗಳಿಗೆ ಸಾಲ ಕೊಟ್ಟು ಹೆಚ್ಚು ವರಿ ಬಡ್ಡಿಯಿಂದ ಬಹಳ ಸಂಪತ್ತನ್ನು ಗಳಿಸಿದನು.

ಬೇತಾಳ ಕಥೆಗಳು

ಕಾಲಕ್ರಮೇಣ ಧರ್ಮಗುಪ್ತನು ವೃದ್ಧನಾದನು. ಆತನಬಳಿ ಐದಾರು ಲಕ್ಷ ಬೆಲೆಬಾಳುವ ಬೆಳ್ಳಿ ಬಂಗಾರವಿತ್ತು. ಅದುವರೆಗೂ ಆತನು ಯಾರಿಗೂ ಒಂದು ಕಿಲುಬುಕಾಸನ್ನು ಧರ್ಮ ಮಾಡಿದವನಲ್ಲ. ಹಾಗೆ ಕೊಡಲು ಆ ಊರಲ್ಲಿ ಆತನಿಗೆ ಬಂಧುಬಳಗವೂ ಇರಲಿಲ್ಲವೆನ್ನಿ.

ಒಂದು ದಿನ ಸಂಜೆ ಧರ್ಮಗುಪ್ತನು ನೆರೆಯೂರಿನಿಂದ ಮನೆಗೆ ಹಿಂತಿರುಗುತ್ತಿದ್ದನು. ದಾರಿಯಲ್ಲಿ ದರೋಡೆಕಾರರ ಕೈಗೆ ಸಿಕ್ಕಿಬಿದ್ದನು. ಅವರು ಆತನನ್ನು ಹಿಡಿದುಕೊಂಡು ಚಚ್ಚಿ ಹಾಕಿದರು. ಆತನ ತಲೆಗೆ ಬಲವಾದ ಗಾಯವಾಗಿ ಕೆಳಗೆ ಬಿದ್ದುಬಿಟ್ಟನು. ಆದರೆ ಕಳ್ಳರಿಗೆ ಒಂದು ಚಿಕ್ಕಾಸೂ ಸಿಕ್ಕಲಿಲ್ಲ. ಕಳ್ಳರು ನಿರಾಶೆಗೊಂಡು ಹೊರಟುಹೋದ ಬಹಳ ಹೊತ್ತಿನ ನಂತರ ಧರ್ಮಗುಪ್ತನಿಗೆ ಪ್ರಜ್ಞೆ ಬಂತು. ಆತನು ಮೆಲ್ಲನೆ ಅಡಿಯಿಡುತ್ತಾ ವಲ್ಲಭೀಪುರದ ಗಡಿ ಸೇರುವವೇಳೆಗೆ ಅರ್ಧರಾತ್ರಿಯಾಗಿತ್ತು. ಅಲ್ಲೊಂದು ಮನೆಯ ಬಾಗಿಲು ತೆರೆದಿತ್ತು. ಮನೆಯಮುಂದೆ ಒಬ್ಬಾತ ನಿಂತಿದ್ದ.

"ತಮ್ಮಾ, ಕೊಂದುಹಾಕಿಬಿಟ್ಟರು ಪಾಪಿಗಳು" ಎಂದು ಅಳುತ್ತಾ ಧರ್ಮಗುಪ್ತನು ಆ ವ್ಯಕ್ತಿಯಿದ್ದ ಕಡೆಗೆ ನಡೆದನು.

ಅರ್ಧರಾತ್ರಿವೇಳೆ ತಂಗಾಳಿಗೆ ಮೈಯೊಡ್ಡಿ ಮನೆಯ ಹೊಸ್ತಲಿನಬಳಿ ನಿಂತಿದ್ದ ಆ ವ್ಯಕ್ತಿ ಒಬ್ಬ ಅಕ್ಕಸಾಲಿಗ. ಹೆಸರು ಲೋಹಿತ. ಲೋಹಿತನು ನಗನಟ್ಟು ಮಾಡಿ ಅಷ್ಟೋ ಇಷ್ಟೋ ಸಂಪಾದಿಸಿ, ಅದನ್ನೆಲ್ಲಾ ಚಿನ್ನಮಾಡುವ ವಿದ್ಯೆಯನ್ನು ಕಲಿಯಲು ಖರ್ಚುಮಾಡಿಬಿಟ್ಟಿದ್ದನು. ಸೀಸ



ವನ್ನು ಬೆಳ್ಳಿಯನ್ನಾಗಿಯೂ, ಹಿತ್ತಾಳೆಯನ್ನು ಬಂಗಾರವನ್ನಾಗಿಯೂ ಮಾಡಲು ಆತನು ಸಂಶೋಧನೆ ನಡೆಸುತ್ತಿದ್ದನು. ದೂರದ ಅಡವಿಗಳಿಂದ, ಬೆಟ್ಟಗಳಮೇಲಿಂದ ಬಗೆಬಗೆಯ ಮೂಲಿಕೆಗಳನ್ನು ತಂದು ಅಹೋರಾತ್ರಿ ಪುಟ ಹಾಕಿ ಬಹಳ ಶ್ರಮಪಡುತ್ತಿದ್ದನು.

ಲೋಹಿತನ ಮಾವ ಸಾವುಬದುಕಿನಲ್ಲಿರುವನೆಂದು ತಿಳಿದು ಆತನ ಹೆಂಡತಿ ಮಕ್ಕಳೊಂದಿಗೆ ತೌರುಮನೆಗೆ ಹೋಗಿದ್ದಳು. ಲೋಹಿತನು ಬೆಳಗಿನಿಂದ ಕುಲುಮೆಯಮುಂದೆ ಕುಳಿತು ಕುಳಿತು ಸಾಕಾಗಿ, ಆಗಲೇ ಮನೆಯ ಹೊರಗೆ ಬಂದು ನಿಂತಿದ್ದನು.

ತನ್ನಕಡೆ ಬಂದ ಧರ್ಮಗುಪ್ತನನ್ನು ಕೂಡಲೇ ಆತನು ಗುರುತಿಸಲಿಲ್ಲ. ಆದರೂ ಆತನು ಮುದುಕನ ಕೈ ಹಿಡಿದುಕೊಂಡು, ಒಳಕ್ಕೆ ಕರೆದುಕೊಂಡು ಹೋದನು. ಕುಲುಮೆಯ ಬೆಳಕಿನಲ್ಲಿ ಆತನು ಧರ್ಮಗುಪ್ತನ ಗುರುತುಹಿಡಿದನು. "ಅರೆ, ನೀವೇ. ಅದೇನು ಈ ಅರ್ಧರಾತ್ರಿವೇಳೆಯಲ್ಲಿ?" ಎಂದು ಬೆರಗಾಗಿ ನುಡಿದನು. "ಅಯ್ಯೊ, ಏನು ಹೇಳಲಿ. ಕಳ್ಳರು ತಲೆ ಸೀಳಿದಾರೆ" ಎಂದು ಹೇಳುತ್ತಾ ಧರ್ಮಗುಪ್ತನು ಪ್ರಾಣಬಿಟ್ಟನು.

ತಾನೀಗ ಏನು ಮಾಡಬೇಕೋ ಲೋಹಿತನಿಗೆ ತಿಳಿಯದಾಯಿತು. ಸುತ್ತಮುತ್ತಲಿದ್ದವರನ್ನು ಎಚ್ಚರಗೊಳಿಸಲು ನಿರ್ಧರಿಸಿದ. ಆದರೆ ಅವರೆಲ್ಲರೂ ಸೇರಿ 'ನೀನೇ ಹಣಕ್ಕಾಗಿ ಮುದುಕನನ್ನು ಕೊಂದಿರಬೇಕು' ಎಂದು ಅಪವಾದ ಹೊರಿಸಿದರೇನು ಗತಿ ಎಂದು ಭಯಪಟ್ಟ.





ಧರ್ಮಗುಪ್ತನು ಸತ್ತುಹೋಗಿರುವುದೇನೋ ನಿಜ. ಆತನಿಗೆ ಯಾರೂ ಸಹಾಯ ಮಾಡುವವರಿಲ್ಲ. ಆತನು ತನ್ನ ಮನೆಗೆ ಅರ್ಧರಾತ್ರಿ ವೇಳೆಗೆ ಬಂದುದನ್ನು ಯಾರೂ ಕಂಡಿಲ್ಲ. ಆದುದರಿಂದ ಈ ಕಷ್ಟಪರಿಸ್ಥಿತಿಯಿಂದ ಪಾರಾಗುವುದು ದುಸ್ತರವಾಗಿ ಕಾಣಿಸಲಿಲ್ಲ ಆತನಿಗೆ.

ಆತನಿಗೆ ಮತ್ತೊಂದು ಯೋಚನೆ ಹೊಳೆಯಿತು. ಧರ್ಮಗುಪ್ತನಲ್ಲಿ ಹೇರಳವಾಗಿ ಧನವಿರುವಂತೆ ಸುದ್ದಿ. ಆ ಆಸ್ತಿಗೆ ವಾರಸುದಾರರು ಯಾರೂ ಇಲ್ಲ. ಆ ಹಣವೆಲ್ಲಾ ಅರಸನ ಖಜಾನೆಗೆ ಸೇರುವುದು ಖಂಡಿತ. ಏಕೆ ಆ ಹಣವನ್ನು ಯಾರಿಗೂ ತಿಳಿಯದಂತೆ ಈಗಿಂದೀಗಲೇ ತೆಗೆದುಕೊಳ್ಳಬಾರದು? ಲೋಹಿತನಿಗೆ ತನ್ನ ಮಡದಿ ಮಕ್ಕಳೆಂದರೆ ಅತಿ ಮಮತೆ, ಅವರನ್ನು



ಸುಖವಾಗಿರಿಸಲು ಚಿನ್ನ ಮಾಡುವ ಹವ್ಯಾಸದಲ್ಲಿ ಬಿದ್ದನು. ಈಗಲೂ ಆತನು ಅವರ ಸುಖಕ್ಕಾಗಿಯೇ ಧರ್ಮಗುಪ್ತನ ಹಣವನ್ನು ಅಪಹರಿಸುವ ಮನಸ್ಸುಮಾಡಿದನು.

ಧರ್ಮಗುಪ್ತನ ಅಂಗಿಯ ಕಿಸೆಯಲ್ಲಿ ಬೀಗದ ಗೊಂಚಲು ಸಿಕ್ಕಿತು. ಲೋಹಿತನು ಅದನ್ನು ತೆಗೆದುಕೊಂಡು ನೆಟ್ಟಗೆ ಧರ್ಮಗುಪ್ತನ ಮನೆಗೆ ಹೋದನು. ಬಾಗಿಲು ತೆಗೆದು ಒಳಗೆ ಪ್ರವೇಶಿಸಿದನು. ಕಬ್ಬಿಣದ ಸಂದೂಕದಲ್ಲಿ ಲಕ್ಷಾಂತರ ಬೆಲೆಬಾಳುವ ಚಿನ್ನ ಬೆಳ್ಳಿಯಿತ್ತು. ಅದೆಲ್ಲವನ್ನೂ ಒಂದು ಗೋಣಿಚೀಲದಲ್ಲಿ ತುಂಬಿಕೊಂಡು, ಸಂದೂಕದ ಬಾಗಿಲು ಮುಚ್ಚಿ, ಮನೆಗೆ ಬೀಗ ಹಾಕಿ ತನ್ನ ಮನೆಯನ್ನು ಸೇರಿಕೊಂಡ.

ಬೆಳಗಾಗುವ ವೇಳೆಗೆ ಲೋಹಿತನು ಚಿನ್ನ ಬೆಳ್ಳಿಯನ್ನು ಮನೆಯ ಅಟ್ಟದಮೇಲಿಟ್ಟು, ಅನ್ಯರಿಗೆ ಕಾಣದಂತೆ ಬೆರಣಿಯನ್ನು ಅದರಮೇಲೆ ಜೋಡಿಸಿ, ಧರ್ಮಗುಪ್ತನ ಶವವನ್ನು ಬೀಗದ ಗೊಂಚಲೊಂದಿಗೆ ತನ್ನ ಮನೆ ಹಿತ್ತಲಲ್ಲಿ ಹೂತುಬಿಟ್ಟನು. ಎರಡು ಮೂರು ದಿನ ಧರ್ಮಗುಪ್ತನನ್ನು ಕುರಿತು ಯಾರೂ ಯೋಚಿಸಲಿಲ್ಲ. ತರುವಾಯ ಆತನಿಗಾಗಿ ಹುಡುಕಾಡುವುದು ಪ್ರಾರಂಭವಾಯಿತು. ಆತನು ಎರಡು ಮೂರು ದಿನಗಳ ಹಿಂದೆ ಬೆಳಗಿನಜಾವ ನೆರೆಯೂರನ್ನು ಬಿಟ್ಟಿರುವುದನ್ನು ಕಂಡಿದ್ದವರು ಕೆಲವರಿದ್ದರೇ ಹೊರತು ಯಾರೂ ಆತನು ವಲ್ಲಭೀಪುರಕೆ ಹಿಂತಿರುಗಿ ಬಂದುದನ್ನು ಕಂಡಿರಲಿಲ್ಲ. ಎಲ್ಲೋ



ನಡುದಾರಿಯಲ್ಲಿ ಸತ್ತುಹೋಗಿರಬಹುದೆಂದು ಜನ ನಿರ್ಧರಿಸಿದರು. ರಾಜಭಟರು ಧರ್ಮ ಗುಪ್ತನ ಮನೆಯ ಬೀಗ ಒಡೆದು ಮನೆಯೆಲ್ಲ ವನ್ನೂ ಪರೀಕ್ಷಿಸಿ ಆಸ್ತಿ ಸ್ವಾಧೀನಪಡಿಸಿ ಕೊಂಡರು. ಆದರೆ ಆಸ್ತಿಪಾಸ್ತಿ ಬಹಳ ಕಡಿಮೆ ಯಾಗಿರುವುದನ್ನು ಕಂಡು ಅವರು ಬೆರಗಾದರು. ಮನೆಗೆ ಕಳ್ಳಕಾಕರು ಬಿದ್ದ ಲಕ್ಷಣಗಳಿಲ್ಲ.

ದಿನ ಕಳೆದಂತೆ ಧರ್ಮಗುಪ್ತನ ಸಂಗತಿ ಯನ್ನು ಜನರಾಡಿಕೊಳ್ಳುವುದು ನಿಂತು ಹೋಯಿತು. ಇನ್ನು ತನಗೆ ಯಾವ ಭಯವೂ ಇಲ್ಲವೆಂದು ಭಾವಿಸಿದ ಲೋಹಿತ. ತೌರುಮನೆ ಯಿಂದ ಆತನ ಹೆಂಡತಿ ಮಕ್ಕಳು ಹಿಂತಿರುಗಿ ಬಂದಿದ್ದರು. ಲೋಹಿತನು ಒಂದು ದಿನ ಹೆಂಡತಿ ಯೊಂದಿಗೆ "ಲೇ, ಕಾಶಿಯಲ್ಲಿ ಒಬ್ಬ ಸಿದ್ಧರಿರುವ ರಂತೆ. ಅವರಿಗೆ ಚಿನ್ನಮಾಡುವ ವಿಧಾನ ತಿಳಿ ದಿದೆಯೆಂದು ಕೇಳಿದ್ದೇನೆ. ಅವರ ಸೇವೆಮಾಡಿ ಆ ವಿದ್ಯೆಯನ್ನು ಕಲಿತು ಬರುವೆನು. ಬಂದ ನಂತರ ನಿನಗೆ ಮತ್ತು ಮಕ್ಕಳಿಗೆ ಬೇಕಾದಷ್ಟು ಒಡವೆ ಮಾಡಿಸುವೆನು."

ಲೋಹಿತನ ಹೆಂಡತಿಗೆ ಗಂಡನೆಂದರೆ ಪ್ರಾಣ. "ಚಿನ್ನವಿಲ್ಲದಿದ್ದರೆ ಚಿಂತೆಯಿಲ್ಲ. ಸದ್ಯ ನಿಮ್ಮ ಕೆಲಸ ಮಾಡಿಕೊಂಡು ಮನೆಯಲ್ಲೇ ಇರಿ. ನನಗದೇ ಸಾಕು. ಎಲ್ಲಿ ಕಾಶಿ, ಎಲ್ಲಿ ವಲ್ಲಭೀ ಪುರ. ಖಂಡಿತ ನೀವು ಹೋಗುವುದು ಬೇಡ" ಎಂದು ಕಣ್ಣೀರಿಟ್ಟಳು. ಲೋಹಿತನು ತನ್ನ ಪತ್ನಿಗೆ ನಿಜಸಂಗತಿಯನ್ನು ಹೇಳಲೇಬೇಕಾ ಯಿತು. ಆಕೆಗೆ ಎಲ್ಲವನ್ನೂ ತಿಳಿಸಿ ಬೆರಣಿಯ



ಕೆಳಗೆ ಬೆಳ್ಳಿ ಬಂಗಾರವನ್ನು ಬಚ್ಚಿಟ್ಟಿರುವ ಸಂಗತಿಯನ್ನೂ ತಿಳಿಸಿದನು. "ಯಾವುದೋ ಒಂದು ನಾಟಕವಾಡದಿದ್ದರೆ ನಾವು ಈ ಹಣ ವನ್ನು ಅನುಭವಿಸುವಂತಿಲ್ಲ. ಆರು ತಿಂಗಳು ನಾನೆಲ್ಲಿಗಾದರೂ ಹೋಗಿಬಿಟ್ಟು, ಬರಲು ಅವ ಕಾಶ ಕೊಡು. ತರುವಾಯ ನಾವೆಲ್ಲ ಸುಖವಾಗಿ ಬಾಳಬಹುದು" ಎಂದು ಲೋಹಿತನು ಹೆಂಡ ತಿಗೆ ಹೇಳಲು ಆಕೆ ಒಪ್ಪಿಕೊಂಡಳು.

ಅನುಮಾನಕ್ಕೆ ಎಡೆಕೊಡದಿರಲು ಲೋಹಿ ತನು ಅವರಿವರಿಂದ ದಾರಿಖರ್ಚಿಗೆ ಹಣ ಸಾಲ ಪಡೆದು ಕಾಶಿಗೆ ಹೊರಡುವುದಾಗಿ ಪ್ರಯಾಣ ಬೆಳೆಸಿದನು. ಲೋಹಿತನು ಹಿಂತಿರುಗಿ ಬರುವ ತನಕ ಆತನ ಹೆಂಡತಿ ಮಕ್ಕಳು ತುಂಬಾ ಬಡತನದ ಜೀವನ ನಡೆಯಿಸಿದರು. ಆರು





ತಿಂಗಳ ನಂತರ ಒಂದು ಅರ್ಧರಾತ್ರಿವೇಳೆ ಲೋಹಿತನು ಮನೆಗೆ ಬಂದು, ಅಟ್ಟದಮೇಲಿದ್ದ ಬೆಳ್ಳಿ ಬಂಗಾರವನ್ನು ಕೆಳಗಿಳಿಸಿದನು. ಮಾರನೇಯ ದಿನ ತನ್ನ ಆಪ್ತರನ್ನು ಮನೆಗೆ ಆಹ್ವಾನಿಸಿ ತನ್ನ ಸೊತ್ತನ್ನು ತೋರಿಸಿ "ಕಾಶಿಯಲ್ಲಿ ಪ್ರಸಿದ್ಧ ಸಿದ್ಧರ ಅನುಗ್ರಹದಿಂದ ಈ ಚಿನ್ನ ಬೆಳ್ಳಿ ಗಳಿಸಿದೆನು. ಇನ್ನುಮುಂದೆ ನಮ್ಮ ಕುಟುಂಬವೆಲ್ಲಾ ಸುಖವಾಗಿ ಕಾಲಕಳೆಯ ಬಹುದು" ಎಂದನು. ಎಲ್ಲರೂ ಲೋಹಿತನ ಅದೃಷ್ಟವನ್ನು ಕೊಂಡಾಡಿದರು. ಲೋಹಿತನು ಮನೆ ಮಠಗಳನ್ನೂ ಹೊಲ ಗದ್ದೆಗಳನ್ನೂ ಕೊಂಡುಕೊಂಡು ಸುಖವಾಗಿದ್ದನು.

ಆದರೆ ರಾಜನ ಆಸ್ಥಾನದಲ್ಲಿದ್ದ ಒಬ್ಬ ಅಧಿಕಾರಿಗೆಮಾತ್ರ ಲೋಹಿತನ ಆಸ್ತಿಯಮೇಲೆ ಕ್ರೂರದೃಷ್ಟಿ ಬಿತ್ತು. ಆತನಿಗೆ ಅಪೂರ್ವ ಸುಂದರಿಯಾದ ಮಗಳಿದ್ದಳು. ಆಕೆಯನ್ನು ಲೋಹಿತನಿಗೆ ಕೊಟ್ಟು ವಿವಾಹಮಾಡಿ, ಲೋಹಿತನ ಹಿರಿಯ ಹೆಂಡತಿ ಮತ್ತು ಮಕ್ಕಳನ್ನು ಹೊರಗೆಹಾಕಲು ಒಂದು ಉಪಾಯ ಹೂಡಿದ. ಒಂದು ದಿನ ಲೋಹಿತನನ್ನು ತನ್ನ ಮನೆಗೆ ಔತಣಕ್ಕೆ ಆಹ್ವಾನಿಸಿ, ತನ್ನ ಮಗಳನ್ನು ಆತನಿಗೆ ಪರಿಚಯಮಾಡಿಕೊಟ್ಟು "ಇವಳಿಗೆ ಮದುವೆಯ ವಯಸ್ಸಾಗಿದೆ. ಆದರೆ ನಿಮ್ಮನ್ನುಹೊರತು ಅನ್ಯರನ್ನು ವಿವಾಹವಾಗುವುದಿಲ್ಲವೆಂದು ಚಂಡಿ ಹಿಡಿದಿದ್ದಾಳೆ" ಎಂದನು. ಲೋಹಿತನ ಮನಸ್ಸು ಅತ್ತಕಡೆ ವಾಲಿತು. ಆ ಅಧಿಕಾರಿ ಉತ್ತಮ ಕುಲ ಪ್ರಸೂತನು. ಆತನ ಮಗಳು ಅಪೂರ್ವ ಅಂದ ಗಾತಿ. ಲೋಹಿತನು ಆಕೆಯನ್ನು ವಿವಾಹ



ವಾಗಲು ಅಂಗೀಕರಿಸಿದನು. ಎಲ್ಲಸಿದ್ಧತೆ ನಡೆದು ತೀರಾ ನಾಳೆ ಮದುವೆ ಎನ್ನಲು ಲೋಹಿತನ ಹೆಂಡತಿಗೆ ತನ್ನ ಗಂಡನು ಮತ್ತೊಂದು ಮದುವೆ ಮಾಡಿಕೊಳ್ಳಲಿರುವನೆಂದು ತಿಳಿಯಿತು. ಆಕೆ ಗಂಡನಮುಂದೆ ಅತ್ತು ಕರೆದಳು. ಈ ವಿವಾಹ ವಾಗಲು ಸಾಧ್ಯವಿಲ್ಲವೆಂದಳು.

"ನಿನಗೇನು ಕೊರತೆ? ಎಲ್ಲ ಸಿದ್ಧತೆಗಳಾದ ನಂತರ ಈಗ ಮದುವೆ ನಿಲ್ಲಿಸುವುದು ಹೇಗೆ? ನನಗೆ ತೊಂದರೆ ಕೊಡಬೇಡ" ಎಂದ ಲೋಹಿತ.

ತನ್ನನ್ನು ಪ್ರಾಣಕ್ಕಿಂತಲೂ ಹೆಚ್ಚಾಗಿ ಕಾಣು ತ್ತಿದ್ದ ಗಂಡ ಅನಿರೀಕ್ಷಿತವಾಗಿ ಈ ರೀತಿ ತಾತ್ಸಾರ ದಿಂದ ಕಾಣಲು ಆಕೆಗೆ ಹುಚ್ಚು ಹಿಡಿದಂತಾ ಯಿತು. ಆಕೆ ಹಿಂದೆಮುಂದೆ ಆಲೋಚಿಸದೆ ನೆಟ್ಟಗೆ ಮಂತ್ರಿಯ ಬಳಿಗೆ ಹೋಗಿ "ಮಹಾ ಸ್ವಾಮಿ, ಕೆಲವುದಿನಗಳ ಕೆಳಗೆ ನನ್ನ ಗಂಡ ಧರ್ಮಗುಪ್ತರನ್ನು ಕೊಲೆಮಾಡಿ ಆತನ ಆಸ್ತಿ ಯನ್ನು ಅಪಹರಿಸಿರುವರು. ಧರ್ಮಗುಪ್ತನ ಶವವನ್ನು ನಮ್ಮ ಮನೆಹಿತ್ತಲಲ್ಲಿ ಹೂತಿಟ್ಟಿ ದ್ದಾರೆ. ಬೇಕಾದರೆ ಬಂದು ನೋಡಿ" ಎಂದಳು.

ಕೂಡಲೇ ಮಂತ್ರಿ ರಾಜಭಟರನ್ನು ಕಳು ಹಿಸಿ, ಲೋಹಿತನ ಮನೆಯ ಹಿತ್ತಲನ್ನು ಶೋಧಿ ಸಲು ಧರ್ಮಗುಪ್ತನ ಶವ ಸಿಕ್ಕಿತು. ರಾಜ ಭಟರು ಲೋಹಿತನನ್ನು ಹಿಡಿದುಕೊಂಡು ಹೋದರು. ನ್ಯಾಯಸ್ಥಾನದಲ್ಲಿ ಲೋಹಿತನು ನಿಜಾಂಶವನ್ನು ನುಡಿದನು. ಆದರೆ ಯಾರೂ ನಂಬಲಿಲ್ಲ. ಲೋಹಿತನನ್ನು ರಾಜ ಗಲ್ಲಿಗೇರಿಸಿ ದನು. ಲೋಹಿತನ ಆಸ್ತಿ ರಾಜನ ವಶವಾಯಿತು. ಪಶ್ಚಾತ್ತಾಪಗೊಂಡ ಲೋಹಿತನ ಪತ್ನಿ ಪತಿಯ



ಶವದೊಂದಿಗೆ ಸಹಗಮನಮಾಡಿದಳು. ಲೋಹಿತನ ಮಕ್ಕಳು ಅನಾಥರಾದರು.

ಬೇತಾಳ ಈ ಕತೆ ಹೇಳಿ "ರಾಜನೇ, ಲೋಹಿತನ ಸಂಸಾರ ಸರ್ವನಾಶವಾಗಲು ಕಾರಣರು ಯಾರು? ತನ್ನ ಗಂಡನು ಬೇರೆ ಮದುವೆಯಾಗುವನೆಂಬ ಅಸೂಯೆಯಿಂದ ಗಂಡನ ಮೇಲೆ ತಪ್ಪು ಹೊರಿಸಿದ ಲೋಹಿತನ ಪತ್ನಿಯೇ? ಧರ್ಮಗುಪ್ತನ ಹಣವನ್ನು ಅಪಹರಿಸಿದ ಲೋಹಿತನೇ? ಇಲ್ಲ, ಆತನು ಹತ್ಯೆ ಮಾಡಲಿಲ್ಲವೆಂಬ ಸಂಗತಿ ಗ್ರಹಿಸದ ರಾಜನೇ? ಉತ್ತರ ತಿಳಿದೂ ಹೇಳದಿದ್ದರೆ ನಿನ್ನ ತಲೆ ಸಾವಿರ ಹೋಳುಗಳಾದೀತು?" ಎಂದಿತು.

"ಲೋಹಿತನ ಸಂಸಾರ ಹಾಳಾಗಲು ಆತನ ಪತ್ನಿ ಕಾರಣಳಲ್ಲ. ಗಂಡನಮೇಲಿನ ಪ್ರೇಮದಿಂದ ಆಕೆಗೆ ಅಸೂಯೆ ಜನಿಸಿತು. ಗಂಡನ ವಿವಾಹವನ್ನು ತಡೆಯಲು ಅದೊಂದೇ ಮಾರ್ಗ ಉಳಿದಿತ್ತು. ಅಂತಲೇ ಹಾಗೆ ಮಾಡಿದಳು. ತರುವಾಯ ಆಕೆ ಸಹಗಮನವಾಚರಿಸಿದಳೇ ಹೊರತು, ಗಂಡನು ಮಡಿದುದಕ್ಕೆ ಸಂತೃಪ್ತಿ ಪಡೆಯಲಿಲ್ಲ. ಲೋಹಿತನು ತಪ್ಪು ಮಾಡಿಲ್ಲ. ಆತನು ಧರ್ಮಗುಪ್ತನ ಸೊತ್ತನ್ನು ಅಪಹರಿಸಿದ ಮಾತು ನಿಜವಾದರೂ, ಆತನು ಕಳ್ಳತನ ಮಾಡುವ ವೇಳೆಗೆ ಧರ್ಮಗುಪ್ತನು ಮರಣಿಸಿದ್ದನು. ಆ ಆಸ್ತಿಗೆ ವಾರಸುದಾರರಿರಲಿಲ್ಲ. ಇನ್ನೊಂದಷ್ಟು ಹೊತ್ತು ಜೀವಿಸಿದ್ದರೆ ಬಹುಶಃ ಆ ಆಸ್ತಿಯನ್ನು ಧರ್ಮಗುಪ್ತನೇ ಲೋಹಿತನಿಗೆ ಕೊಟ್ಟಿರಲೂಬಹುದು. ರಾಜನದೂ ಇದರಲ್ಲಿ ತಪ್ಪಿಲ್ಲ. ಏಕೆಂದರೆ ತನ್ನೆದುರಿಗೆ ಒದಗಿಸಲಾದ ಸಾಕ್ಷ್ಯದ ಆಧಾರದಮೇಲೆ ಶಿಕ್ಷೆ ವಿಧಿಸಿದನು. ಲೋಹಿತನ ಸರ್ವನಾಶಕ್ಕೆ ನಿಜವಾದ ಕಾರಣ ಹಣ. ಆ ಹಣವೇ ಧರ್ಮಗುಪ್ತನ ಪ್ರಾಣ ತೆಗೆದುಕೊಂಡಿತು. ಅದೇ ಲೋಹಿತನಿಗೆ ಎರಡನೇ ಮದುವೆಯ ಆಶೆಯುಂಟುಮಾಡಿತು. ಲೋಹಿತನ ಪತ್ನಿಗೆ ಹುಚ್ಚು ಹಿಡಿಸಿತು. ಕೊನೆಗೆ ಆತನ ಸರ್ವನಾಶ ಮಾಡಿತು. ಎಲ್ಲಾ ಅನರ್ಥಗಳಿಗೂ ಹಣವೇ ಮೂಲಕಾರಣವಲ್ಲದೆ, ಬೇರೆ ಯಾರೂ ಅಲ್ಲ," ಎಂದು ಹೇಳಿದ ತ್ರಿವಿಕ್ರಮ.

ಈ ರೀತಿ ರಾಜನು ಮೌನಭಂಗ ಮಾಡಿದ ತಕ್ಷಣ ಬೇತಾಳ ಯಥಾಪ್ರಕಾರ ಶವದೊಂದಿಗೆ ಮಾಯವಾಯಿತು.





# ಮೊಲ-ಹಸು

ಗಿಡಗನನ್ನು ಮೊಸಗೊಳಿಸಿ ಓಡಿಬರುತ್ತಿದ್ದ ಮೊಲಕ್ಕೆ ತನ್ನ ಮನೆಯ ಸಮೀಪದಲ್ಲಿ ಅತ್ತೆ ಹಸು ಕಾಣಿಸಿತು. ಹಸುವನ್ನು ಕಂಡರೆ ಮೊಲಕ್ಕೆ ಕೋಪ. ಅದಕ್ಕೆ ಒಂದು ಕಾರಣವಿದೆ.

ಮೊಲ ಎಷ್ಟು ಸಾರಿ ಕೇಳಿದರೂ ಹಸು ಒಂದು ತೊಟ್ಟು ಹಾಲು ಕೊಟ್ಟ ಪಾಪಕ್ಕೆ ಹೋಗಲಿಲ್ಲ. ಔಷಧಿಗೆ ಸ್ವಲ್ಪ ಹಾಲು ಕೊಡುವಂತೆ ಬೇಡಿದರೂ ನಿರಾಕರಿಸಿತು ಹಸು. ಹಸುವಿಗೆ ಪಾಠಕಲಿಸಲು ಮೊಲ ಸಮಯಕ್ಕಾಗಿ ಎದುರುನೋಡುತಿತ್ತು. "ಏನತ್ತೆ, ಹೇಗಿದೀಯಾ?" ಎಂದು ಕೇಳಿತು ಮೊಲ.

"ಹುಂ, ಚೆನ್ನಾಗಿದ್ದೇನಪ್ಪಾ. ನೀನು ಸೌಖ್ಯವೇ?" ಎಂದು ಕೇಳಿತು ಹಸು.

"ಏನೋ, ಇಷ್ಟರಮಟ್ಟಿಗೆ" ಎಂದು ಹೇಳಿ ಮೊಲ ಪಕ್ಕದಲ್ಲಿದ್ದ ನೇರಳೆ ಮರವನ್ನು ನೋಡಿ "ಅಹಹಾ, ಎಂಥ ಸೊಗುಸಾದ ಹಣ್ಣುಗಳು. ಬಾಯಲ್ಲಿ ನೀರೂರುತ್ತದೆ" ಎಂದಿತು.

"ತೆಗೆದುಕೊಂಡು ತಿನ್ನು" ಎಂದಿತು ಹಸು. "ನನಗೆ ಮರವೇರಲು ಬಾರದು. ಯಾರಾದರೂ ಮರವನ್ನು ಅಲ್ಲಾಡಿಸಿದರೆ ಹಣ್ಣುಗಳು ಕೆಳಗೆ ಉದುರುತ್ತವೆ. ಆರಿಸಿಕೊಂಡು ತಿಂದೇನು? ನಿನ್ನ ತಲೆಯನ್ನು ಮರದಬುಡಕ್ಕೆ ಡೀಹೊಡೆದು ಹಣ್ಣು ಉದುರಿಸಬಲ್ಲೆಯಾ? ಹೂಂ, ನಿನ್ನಿಂದ ಸಾಧ್ಯವಿಲ್ಲ. ಬಹಳ ಶಕ್ತಿಯಿರಬೇಕು" ಎಂದು ನಿರಾಶೆಯಿಂದ ನುಡಿಯಿತು ಮೊಲ.

"ಅಳಿಯನೇ, ನೋಡು ನನ್ನ ಶಕ್ತಿಯನ್ನು" ಎಂದು ಹಸು ತನ್ನ ತಲೆಯಿಂದ ನೇರಳೇ ಮರಕ್ಕೆ ಡಿಕ್ಕಿ ಹೊಡೆಯಿತು. ಆದರೆ ಮರದಲ್ಲಿ ಕಾಯಿಗಳು ಮಾತ್ರ ವಿದ್ದುದರಿಂದ ಒಂದಾದರೂ ಕೆಳಗೆ ಬೀಳಲಿಲ್ಲ. "ನಾನು ಹೇಳಲಿಲ್ಲವೇ? ನಿನಗೆ ಶಕ್ತಿ ಸಾಲದೂ ಎಂತ" ಅಣಕವಾಡಿತು ಮೊಲ.

ಹಸುವಿಗೆ ರೋಷಬಂತು. ಅದು ಹತ್ತು ಹೆಜ್ಜೆ ಹಿಂದೆ ಹೋಗಿ ಅತಿ ವೇಗವಾಗಿ ಓಡಿ ಬಂದು ಮರಕ್ಕೆ ಡಿಕ್ಕಿ ಹೊಡೆಯಿತು. ಆ ರಭಸಕ್ಕೆ ಹಸುವಿನ ಕೊಂಬುಗಳು ಮರದ ಸಂದಿನಲ್ಲಿ ಸಿಲುಕಿಕೊಂಡುವು.

"ಅರೆ, ಎಂತಹ ಅಚಾತುರ್ಯ ನಡೆಯಿತು. ನಾನು ಹೋಗಿ ಎತ್ತು ಮಾವನನ್ನು ಕರೆದು

ಎಸ್. ನಂಜುಂಡಯ್ಯ

ಕೊಂಡು ಬರುವೆನು" ಎಂದು ಮೊಲ ಅಲ್ಲಿಂದ ಓಟಕಿತ್ತಿತು. ಮನೆಗೆ ಹೋಗಿ ಒಂದು ಚೆಂಬು ತೆಗೆದುಕೊಂಡು ಬಂತು. ಚಿಕ್ಕಪುಟ್ಟ ಮೊಲಗಳೆಲ್ಲಾ ಹಸುವಿನ ಹಾಲನ್ನು ಕೊನೆತೊಟ್ಟಿನವರೆವಿಗೂ ಕರೆದು ಮನೆಗೆ ಹೊರಟುಹೋದುವು.

ಹಸುವಿನ ಕೋಪ ನೆತ್ತಿಗೇರಿತು. ಅಂದೆಲ್ಲಾ ಅದು ನಾನಾಯಾತನೆ ಪಟ್ಟು ಬೆಳಗಿನಜಾವದ ವೇಳೆಗೆ ತನ್ನ ಕೊಂಬುಗಳನ್ನು ಮರದ ಸಂದಿನಿಂದ ಬಿಡಿಸಿಕೊಂಡಿತು. ತನಗಿಷ್ಟು ಕಷ್ಟ ಕೊಟ್ಟ ಮೊಲಕ್ಕೆ ಬುದ್ಧಿ ಹೇಳಬೇಕೆಂದು ಆ ಹಸು ಮತ್ತೆ ತನ್ನ ಕೊಂಬುಗಳನ್ನು ಮರದ ಸಂದಿಗೆ ಸಡಿಲವಾಗಿ ತೂರಿಸಿ ಮೊಲದ ಬರುವಿಕೆಯನ್ನೇ ಎದುರುನೋಡುತಿತ್ತು.

ಹಸು ಮಾಡಿದ ಕೆಲಸವನ್ನು ಮರೆಯಿಂದ ನೋಡಿದ ಮೊಲ, ಏನೂ ಅರಿಯದಂತೆ ಸಿಳ್ಳು ಹಾಕುತ್ತಾ ಮರದಬಳಿಗೆ ಬಂದು "ಅತ್ತೇ, ಈವೇಳೆಗೆ ನೀನು ಕೊಂಬುಗಳನ್ನು ಹೊರಕ್ಕೆಳೆದು ಕೊಂಡಿರ ಬಹುದೆಂದು ಭಾವಿಸಿದ್ದೆ" ಎಂದಿತು.

"ಎಲ್ಲಿ ನೀನಿಷ್ಟು ಸಹಾಯ ಮಾಡಿದರೆ ಆಗುತ್ತೆ ಆ ಕೆಲಸ. ಹಿಂದಿನಿಂದ ಬಂದು ನನ್ನ ಬಲಗಾಲನ್ನು ಹಿಡಿದೆಳೆ" ಎಂದಿತು ಹಸು. "ಸರಿ" ಎಂದು ಹೇಳಿ ಮೊಲ ಹಸುವಿನ ಹಿಂದೆ ಹೋದಂತೆ ನಟಿಸಿತು. ಹಸು ಚಟಕ್ಕನೆ ಕೊಂಬುಗಳನ್ನು ಮರದ ಬುಡದಿಂದ ಹೊರಕ್ಕೆಳೆದು ಮೊಲದಮೇಲೆ ಹಾರಿತು. ಮೊಲ ಚಟಕ್ಕನೆ ತಪ್ಪಿಸಿಕೊಂಡು ಅಲ್ಲಿಂದಪರಾರಿಯಾಯಿತು. ಹಸು ಅದನ್ನು ಅಟ್ಟಿಸಿಕೊಂಡು ಹೋಯಿತು. ಮೊಲ ಸ್ವಲ್ಪದೂರ ಓಡಿಬಂದು ಪೊದೆಯಲ್ಲಿ ನುಗ್ಗಿ ಎಲೆಗಳ ಸಂದಿನಿಂದ ನೋಡುತಿತ್ತು. ಇಷ್ಟರಲ್ಲಿ ಹಸು ಏದುತ್ತ ಅಲ್ಲಿಗೆ ಬಂತು.

"ಹಸು ಅತ್ತೆ, ಏನಿದು ಹಾರಾಟ ?" ಎಂದಿತು ಮೊಲ. ಹಸು ಮೊಲದ ಕಣ್ಣುಗಳನ್ನು ಮಾತ್ರ ನೋಡಿತಾದ್ದರಿಂದ ಅದು ಜಿಂಕೆಯಿರಬಹುದೆಂದು ಭಾವಿಸಿ "ನಿನಗೆ ಆ ಹಾಳು ಮೊಲ ಕಾಣಿಸಿತೇ?" ಎಂದು ಕೇಳಿತು.

"ಓ, ಈಗಲೇ ಈ ದಾರಿಯಲ್ಲಿ ಕುಂಟುತ್ತಾ ಹೋಯಿತು" ಎಂದಿತು ಮೊಲ.

"ಹಿಡಿಯದೆ ಬಿಡುವೆನೇ?" ಎಂದು ಹಸು ಮತ್ತೆ ಅಲ್ಲಿಂದ ಓಡಲಾರಂಭಿಸಿತು. ಮೊಲ ಹೊಟ್ಟೆ ಹುಣ್ಣಾಗುವಂತೆ ಪಕಪಕನೆ ನಕ್ಕಿತು.





# ವಂಶಗೌರವ

ಒಂದೂರಿನಲ್ಲಿ ಒಬ್ಬ ಜಮೀನುದಾರನಿದ್ದನು. ಆತನ ವಂಶ ತುಂಬಾ ಪುರಾತನವೂ ಪ್ರಸಿದ್ಧವೂ ಆಗಿತ್ತು. ಆತನ ಪೂರ್ವಿಕರು ಇಕ್ಷ್ವಾಕು ಕುಲದವರ ಕಾಲದಲ್ಲಿ ರಾಜ್ಯಭಾರ ಮಾಡುತ್ತಿದ್ದರೆಂದು ಪ್ರತೀತಿ. ಅದರಿಂದ ಜಮೀನುದಾರರು ತಮ್ಮ ವಂಶಗೌರವನ್ನು ಕಾಪಾಡಿಕೊಳ್ಳಲು ಏನು ತ್ಯಾಗಮಾಡಲೂ ಸಿದ್ಧರಾಗಿದ್ದರು.

ಈಗಿನ ಜಮೀನುದಾರನು ತುಸ ಐಲುಪೈಲು ಜಾತಿಗೆ ಸೇರಿದವನು. ಸದಾ ತನ್ನ ಬಳಿಯಿದ್ದ ಕೋತಿಯೊಂದಿಗೆ ಸಮಯ ಕಳೆಯುವನು. ಆತನಿಗೆ ಮುಕುಂದನೆಂಬ ಒಬ್ಬ ಮಗನಿದ್ದನು. ಜಮೀನುದಾರನ ಆಸ್ತಿಗೆಲ್ಲಾ ಅವನೇ ವಾರಸುದಾರ. ಮುಕುಂದನಿಗೆ ರಾಜಕುಮಾರಿಯನ್ನು ವಿವಾಹವಾಗಬೇಕೆಂದು ಮನಸ್ಸಾಯಿತು. ಅವನು ತಂದೆಗೆ ಈ ವಿಷಯವನ್ನು ತಿಳಿಸಿ ಆತನ ಸಲಹೆ ಕೇಳಿದನು. "ಮಗೂ, ನೀನೇನು ಮಾಡಿದರೂ ಸರಿ ನಮ್ಮ ವಂಶ ಗೌರವಕ್ಕೆ ಮಾತ್ರ ಕಳಂಕ ತರಬೇಡ. ಅಷ್ಟೇ ನನ್ನ ಬಯಕೆ" ಎಂದ ಜಮೀನುದಾರ.

ಕೂಡಲೇ ಮುಕುಂದನು ರಾಜನ ಬಳಿಗೆ ಹೋಗಿ "ಮಹಾರಾಜ, ನಾನು ನಿಮ್ಮ ಮಗಳಲ್ಲಿ ಅನುರಕ್ತನಾಗಿದ್ದೇನೆ. ನಮ್ಮ ವಂಶದ ಗೌರವ ಜನಜನಿತವಾಗಿದೆ. ಆದುದರಿಂದ ಕೂಡಲೇ ನಿಮ್ಮ ಪುರೋಹಿತರನ್ನು ಕರೆಯಿಸಿ ನಮ್ಮ ವಿವಾಹಕ್ಕೆ ಮುಹೂರ್ತವಿಡಿಸಿ" ಎಂದನು.

ರಾಜನು ಮುಕುಂದನೊಂದಿಗೆ ಮುಖಕೊಟ್ಟು ಮಾತನಾಡದೆ ತನ್ನ ಭಟರನ್ನು ಕೂಗಿ "ಈ ಶುಂಠನ ಕತ್ತು ಹಿಡಿದು ಹೊರಗೆ ತಳ್ಳಿ" ಎಂದು ಆಜ್ಞೆ ಮಾಡಿದ.

ರಾಜಭಟರು ಆ ಪ್ರಕಾರವೇ ಮುಕುಂದನನ್ನು ಹೊರಕ್ಕೆದೂಡಿದರು.

ಈ ಸುದ್ದಿ ಕಿವಿಗೆ ಬಿದ್ದಕೂಡಲೇ ಜಮೀನುದಾರನು ಭೂಮಿಗಿಳಿದುಹೋದನು. ಆತನ ವಂಶಕ್ಕೆ ಅಗೌರವವಾಯಿತು. ಜಮೀನುದಾರನಿಗೆ ಅನ್ನ ರುಚಿಸದಾಯಿತು; ನಿದ್ರೆ ಹಿಡಿಸದಾಯಿತು. ತನ್ನ ಮಗ ಕಣ್ಣೆದುರಿಗೆ ಕಾಣಿಸಕೂಡದೆಂದು ನೌಕರರಿಗೆ ಹೇಳಿದನು. ತರುವಾಯ ತನ್ನ ಬಂಧುಮಿತ್ರರನ್ನು ಕರೆಯಿಸಿ

ಎನ್. ವಿಶ್ವನಾಥಶಾಸ್ತ್ರಿ



ಕೊಂಡು ಒಂದು ಸಭೆಸೇರಿಸಿ ಈ ವಿಷಯವನ್ನು ತಿಳಿಸಿದನು. ಎಲ್ಲವನ್ನೂ ಕೇಳಿದ ಬಂಧುಗಳು "ಇದೆಂತಹ ಅಪಮಾನವಾಯಿತು." ಎಂದು ಮೂಗಿನಮೇಲೆ ಬೆರಳಿಟ್ಟುಕೊಂಡರು.

"ಈ ಅಪ್ರತಿಷ್ಠೆ ನನಗೊಬ್ಬನಿಗೇ ಅಲ್ಲ; ನಿಮ್ಮೆಲ್ಲರಿಗೂ. ಆದುದರಿಂದ ಇದಕ್ಕೆ ಪರಿಹಾರ ವೇನೋ ನೀವೇ ಆಲೋಚಿಸಿ, ವಂಶಗೌರವನ್ನು ಕಾಪಾಡುವ ಸಾಧನ ಹೇಳಿ. ಏನು ಬೇಕಾದರೂ ಮಾಡಲು ಸಿದ್ಧನಿರುವೆನು" ಎಂದ ಜಮೀನುದಾರ.

"ಮೊದಲು ಮುಕುಂದನನ್ನು ಮನೆಯಿಂದ ಓಡಿಸಬೇಕು" ಎಂದ ಒಬ್ಬನೆಂಟ. "ಅನಂತರ ನೀವು ಪ್ರಾಯೋಪವೇಶ ಮಾಡಬೇಕು. ಈ ಅಪ್ರತಿಷ್ಠೆಗೆ ನರಬಲಿಯಾಗಲೇಬೇಕು" ಎಂದು ಮತ್ತೊಬ್ಬನೆಂದ. "ಹೌದು ವಂಶಗೌರವಕ್ಕಾಗಿ ಯಾರಾದರೊಬ್ಬರು ಪ್ರಾಣತ್ಯಾಗ ಮಾಡಬೇಕು" ಎಂದು ಉಳಿದ ನೆಂಟರಿಷ್ಟರು ಹೇಳಿದರು. ಮುಕುಂದನನ್ನು ಹೊರಗೆ ಅಟ್ಟಿ, ಜಮೀನುದಾರನು ಸತ್ತುಹೋದರೆ, ಆತನ ಆಸ್ತಿಯೆಲ್ಲಾ ಈ ಬಂಧುಬಳಗಕ್ಕೆ ಸೇರುವುದು. ಅಂತಲೇ ಅವರೆಲ್ಲರೂ ಈ ವಿಧವಾಗಿ ಸಲಹೆಮಾಡಿದರು.

ಜಮೀನುದಾರನು ಕೊಂಚಹೊತ್ತು ಆಲೋಚಿಸಿ "ವಂಶಗೌರವಕ್ಕಾಗಿ ಸಾಯಲು ನನಗೇನೂ ಅಭ್ಯಂತರವಿಲ್ಲ. ಆದರೆ ನನ್ನ ಜಾತಕದಲ್ಲಿ ನನಗೆ ನೂರು ವರ್ಷ ಆಯುಸ್ಸು ಬರೆದಿದೆ" ಎಂದು ಹೇಳಿದನು.

"ಓ, ಈ ಜಾತಕಗಳನ್ನು ನಂಬುವಂತಿಲ್ಲ. ಬ್ರಹ್ಮದೇವನು ಯಾರಿಗೆ ಎಷ್ಟು ಆಯುಸ್ಸು ಕೊಟ್ಟಿರುತ್ತಾನೋ ಯಾವ ಜ್ಯೋತಿಷ್ಕನೂ ಹೇಳಲಾರ" ಎಂದರು ನೆಂಟರು.

"ಇರಲಿ, ನರಬಲಿಯಾಗಲೇಬೇಕೆಂದು ಹೇಳಿದಿರಿ. ಸರಿ, ಅದಕ್ಕೆ ಸೂಕ್ತ ಏರ್ಪಾಟುಗಳನ್ನು ಮಾಡುತ್ತೇನೆ. ಆಗಬಹುದೋ?" ಎಂದು ಹೇಳಿ ಜಮೀನುದಾರನು ಎಲ್ಲರನ್ನೂ ಕಳುಹಿಸಿಬಿಟ್ಟನು.

ತದನಂತರ ತನ್ನ ಹೆಂಡತಿಯ ಬಳಿಗೆ ಹೋಗಿ "ನಮ್ಮ ವಂಶಕ್ಕೆ ಅಪಾರ ಕಳಂಕ ಬಂದಿದೆ. ವಂಶಗೌರವವನ್ನು ಉಳಿಸಲು ಯಾರಾದರೊಬ್ಬರು ಬಲಿಯಾಗಲೇಬೇಕು. ನನ್ನ ಜಾತಕದಲ್ಲಿ ನನಗೆ ನೂರು ವರ್ಷ ಆಯುಸ್ಸು ಅಂತ ಬರೆದಿದೆ. ನನಗೆ ಬದಲಾಗಿ ನೀನು ಬಲಿಯಾದರೆ ವಂಶಗೌರವವನ್ನು ನಿಲ್ಲಿಸಿದೆಯೆಂದು ನಿನ್ನ ಕೀರ್ತಿ ಶಾಶ್ವತವಾಗಿ ನಿಲ್ಲು

ವುದು. ಒಬ್ಬ ಮಗನನ್ನು ಹೆತ್ತೆ. ಮತ್ತೈದೆಯ ಸಾವಿಗಿಂತಲೂ ಸ್ತ್ರೀ ಮತ್ತೇನನ್ನು ಕೋರುವಳು?" ಎಂದನು.

"ಈಗಲೇ ಸಾಯಬೇಕೆ? ಇನ್ನೊಂದಿಷ್ಟು ದಿನ ಕಳೆದನಂತರ ಸತ್ತರಾಗದೆ?" ಎಂದಳು ಜಮೀನುದಾರನ ಮಡದಿ.

"ಆಲಸ್ಯಂ ಅಮೃತಂ ವಿಷಂ ಎಂದು ಹೇಳುತ್ತಾರೆ. ನೀನು ತುಂಬು ಪುಣ್ಯವಂತೆಯಾದುದರಿಂದಲೇ ವಂಶಗೌರವಕ್ಕಾಗಿ ಸಾಯುವ ಮಹಾಭಾಗ್ಯ ನಿನಗೆ ಲಭಿಸಿದೆ. ಇದೋ ಈ ರೇಷ್ಮೆ ಹಗ್ಗವನ್ನು ತೆಗೆದುಕೊಂಡು ದೇವರನ್ನು ಧ್ಯಾನಿಸುತ್ತಾ ನೇಣು ಹಾಕಿಕೋ" ಎಂದು ಹೆಂಡತಿಗೆ ಒಂದು ರೇಷ್ಮೆ ಹಗ್ಗವನ್ನು ಕೊಟ್ಟ ಜಮೀನುದಾರ.

ಗಂಡನು ಅತ್ತ ಹೋದನಂತರ ಆಕೆ ಬಹಳ ಹೊತ್ತು ಯೋಚಿಸಿದಳು. ತಿಳಿಗೇಡಿಯಾದ ತನ್ನ ಗಂಡನು ಹೇಳಿದಮಾತ್ರಕ್ಕೆ ಆಕೆ ನೇಣು ಹಾಕಿಕೊಂಡು ಸಾಯಲು ಸಿದ್ಧಳಾಗಿರಲಿಲ್ಲ. ವಂಶಗೌರವನ್ನು ಉಳಿಸಲು ನರಬಲಿಯಾಗಬೇಕು. ಯಾರು ಬಲಿಯಾದರೇನು?

ಹೀಗೆಂದು ಆಕೆ ತನ್ನ ಅಡಿಗೆಯವನನ್ನು ಕರೆದಳು. ಅವನು ಲಗುಬಗನೆ ಯಜಮಾನಿಯ ಬಳಿಗೆ ಬಂದನು. ಆಗ ಆಕೆ "ನಿನಗೊಂದು ರಹಸ್ಯವನ್ನು ಹೇಳುತ್ತೇನೆ. ನನಗೊಂದು ಕನಸು ಬಿತ್ತು. ಪಾರ್ವತಿ ಪರಮೇಶ್ವರರು ಕಾಣಿಸಿಕೊಂಡು ಇಂದು ರಾತ್ರಿ ನಾನು ಸತ್ತುಹೋದರೆ ಮುಂದಿನ ಜನ್ಮದಲ್ಲಿ ಚಕ್ರವರ್ತಿಯ ಹೆಂಡತಿ



ಯಾಗಿ ಜನಿಸುವೆನೆಂದೂ, ನನ್ನೊಂದಿಗೆ ಸಾಯುವವನು ನನಗೆ ಗಂಡನಾಗಿ ಚಕ್ರವರ್ತಿಯಾಗುವನೆಂದೂ ಹೇಳಿದರು. ಹಿಂದಿನ ಜನ್ಮದಲ್ಲಿ ಯಾವ ಪಾಪ ಮಾಡಿದ್ದೆನೋ ನನಗೆ ಮತಿಹೀನ ಗಂಡ ಸಿಕ್ಕಿದ. ಮುಂದಿನ ಜನ್ಮದಲ್ಲಿ ನಿನ್ನಂತಹ ತಿಳುವಳಿಕೆಯುಳ್ಳ ಪತಿ ಸಿಗಲೆಂದು ನನಗೆ ಆಶೆಯಿದೆ. ಈ ರೇಷ್ಮೆಹಗ್ಗ ತೆಗೆದುಕೊಂಡು ನೇಣು ಹಾಕಿಕೊ. ನಾನೂಸಹ ಇನ್ನೊಂದು ಐದು ನಿಮಿಷಗಳಲ್ಲಿ ವಿಷ ಕುಡಿದು ಸಾಯುವೆನು." ಎಂದಳು. "ಅಪ್ಪಣೆ ತಾಯಿ" ಎಂದು ಅಡಿಗೆಯಾತ ನಡುಗುತ್ತಿರುವ ಕೈಗಳಿಂದ ಹಗ್ಗವನ್ನು ತೆಗೆದುಕೊಂಡು ಹೊರಟು ಹೋದನು.

ಅವನು ಅಡಿಗೆಮನೆಗೆ ಹೋಗಿ ಮುಂದೇನು ಮಾಡಬೇಕೆಂದು ಯೋಚಿಸುತ್ತಿರಲು ಪಕ್ಕದಲ್ಲಿದ್ದ

ಉಗ್ರಾಣದಿಂದ ಏನೋ ಸದ್ದಾಯಿತು. ಆವನು ಹೋಗಿ ನೋಡಿದರೆ ಅಲ್ಲಿ ಜಮೀನುದಾರನ ಮಗ ಮುಕುಂದನು ಬೆಳ್ಳಿ ಪಾತ್ರಗಳನ್ನು ಒಂದು ಚೀಲದಲ್ಲಿ ತುರುಕುತ್ತಿದ್ದನು.

"ಇದೇನಿದು, ಚಿಕ್ಕ ಯಜಮಾನರೇ?" ಎಂದು ಅಡಿಗೆಯವನು ಏರುಧ್ವನಿಯಲ್ಲಿ ಕೇಳಿದ.

"ಹುಷ್, ಕೂಗಾಡಬೇಡ. ನಿನಗೆ ಎಲ್ಲ ವಿಚಾರ ಗೊತ್ತಿಲ್ಲ. ನನ್ನ ಮೂಲಕ ನಮ್ಮ ವಂಶಗೌರವ ಮಣ್ಣುಪಾಲಾಯಿತು. ನರಬಲಿ ಯಾಗಲೇಬೇಕೆಂದು ಹೇಳಿದ್ದಾರೆ ಹಿರಿಯರು. ಅಂತಲೇ ಆತ್ಮಹತ್ಯ ಮಾಡಿಕೊಳ್ಳಲಿದ್ದೇನೆ. ಈ ಗೋಣಿ ಚೀಲದಲ್ಲಿ ಭಾರ ತುಂಬಿ ಅದನ್ನು ಕೊರಳಿಗೆ ಕಟ್ಟಿಕೊಂಡು ನಾನು ನದಿಗೆ ಹಾರುವೆನು. ನೀನು ಕಿರಿಚಾಡಿದರೆ ಎಲ್ಲರೂ ಬಂದು ನನ್ನನ್ನು ತಡೆದುಬಿಡಬಹುದು" ಎಂದ ಮುಕುಂದ ಮೆಲುಧ್ವನಿಯಲ್ಲಿ.

"ಅಷ್ಟೇಕೆ ತೊಂದರೆ ತೆಗೆದುಕೊಳ್ಳುವಿರಿ. ಈ ರೇಷ್ಮೆಹಗ್ಗದಿಂದ ನೇಣು ಹಾಕಿಕೊಳ್ಳ ಬಹುದಲ್ಲಾ. ಇಷ್ಟೊಂದು ಭಾರವಾದ ಮೂಟೆಯನ್ನು ನದಿಯತನಕ ಏಕೆ ಹೊತ್ತುಕೊಂಡು ಹೋಗಬೇಕು." ಎಂದು ಅಡಿಗೆಯವನು ಮುಕುಂದನಿಗೆ ಆ ಹಗ್ಗವನ್ನು ಕೊಟ್ಟನು.

"ಬೇಷ್, ಭಲೆ ಸಲಹೆ ಹೇಳಿದೆ. ನಾನು ನೇಣು ಹಾಕಿಕೊಳ್ಳುವುದನ್ನು ಕಂಡರೆ ನೀನು ಹೆದರಬಹುದು. ನೀನೀಗ ಹೋಗಿ ಮಲಗಿಕೊ. ನಾನು ತೊಲೆಗೆ ಹಗ್ಗವನ್ನು ಕಟ್ಟಿ ನೇಣು ಹಾಕಿಕೊಳ್ಳುತ್ತೇನೆ" ಎಂದ ಮುಕುಂದ. ಅಡಿಗೆಯವನು ಬದುಕು ಬಡಜೀವವೇ ಎಂದು



ಕೊಂಡು ಉಗ್ರಾಣದ ಬಾಗಿಲನ್ನು ಮುಚ್ಚಿ, ತನ್ನ ಸ್ಥಳಕ್ಕೆ ಹೋಗಿ ನಿಶ್ಚಿಂತೆಯಾಗಿ ನಿದ್ರಿಸಿದನು.

ಬೆಳಗಾಯಿತು. ಜಮೀನುದಾರನು ತಕ್ಷಣ ತನ್ನ ಹೆಂಡತಿಯ ಕೋಣೆಗೆ ಹೋದನು. ಆಕೆ ಗಾಢನಿದ್ರೆಯಲ್ಲಿ ಮುಳುಗಿದ್ದಳು. ಜಮೀನು ದಾರನು ಆಕೆಯನ್ನು ತಟ್ಟಿ ಎಬ್ಬಿಸಿ "ನೀನು ನೇಣು ಹಾಕಿಕೊಳ್ಳಲಿಲ್ಲವೇ?" ಎಂದು ಕೇಳಿದ.

"ಇಲ್ಲ. ನಮ್ಮ ಅಡಿಗೆಯವನು ಎಷ್ಟು ವಿಶ್ವಾಸಪಾತ್ರನೆಂದು ತಿಳಿದಿದ್ದೀರಿ. ನಮ್ಮ ವಂಶ ಗೌರವ ಕಾಪಾಡಲು ತಾನು ನೇಣು ಹಾಕಿ ಕೊಳ್ಳುವೆನೆಂದ. ಅವನ ಋಣ ನಾವು ಈ ಜನ್ಮದಲ್ಲಿ ತೀರಿಸಿಕೊಳ್ಳಲಾರೆವು" ಎಂದಳಾ ಜಮೀನುದಾರನ ಪತ್ನಿ. ಆದರೆ ಮತ್ತೆ ಅವ ರಿಗೆ ಅಡಿಗೆಮನೆಯಲ್ಲಿ ಒಲೆ ಹೊತ್ತಿಸುತ್ತಿದ್ದ ಅಡಗೆಯವನು ಕಾಣಿಸಿದ. "ಎಲಾ, ನೀನಿನ್ನೂ ಬದುಕಿರುವೆಯಾ?" ಎಂದಳು ಜಮೀನುದಾರನ ಪತ್ನಿ ಚಕಿತಳಾಗಿ.

"ನಾನೇನು ಮಾಡಲಿ ತಾಯಿ. ತಾವೇ ನೇಣು ಹಾಕಿಕೊಳ್ಳುವೆನೆಂದು ಚಿಕ್ಕ ಯಜ ಮಾನರು ನನ್ನ ಕೈಯಿಂದ ಹಗ್ಗವನ್ನು ಕಿತ್ತು ಕೊಂಡರು. ಬೇಡಬೇಡವೆಂದರೂ ಅವರು ಒಪ್ಪ ಬೇಕಲ್ಲ. ನನಗೆ ನೇಣು ಹಾಕಿಕೊಳ್ಳಲು ಅವ ಕಾಶವೇ ಕೊಡಲಿಲ್ಲ" ಎಂದ ಅಡಿಗೆಯವನು.

ಜಮೀನುದಾರನು ಉಗ್ರಾಣದಲ್ಲಿ ಅಡಿ ಯಿಡಲು ಆತನಿಗೆ ಒಂದು ಆಕಾರ ತೊಲೆ ಯಿಂದ ನೇತಾಡುತ್ತಿರುವುದು ಕಾಣಿಸಿತು. ಅದು ಜಮೀನುದಾರನ ಪ್ರೀತಿಯ ಕೋತಿ. ಜಮೀನು ದಾರನು ಒಂದು ಹೆಜ್ಜೆ ಹಿಂದಿಟ್ಟು ಹೆಂಡತಿ



ಯೊಂದಿಗೆ 'ಲೇ, ಅದು ನಮ್ಮ ಹುಡುಗತಾನೆ? ನೋಡೆ" ಎಂದ. "ಕತ್ತಲೆಯಲ್ಲಿ ಸರಿಯಾಗಿ ಕಾಣಿಸುತ್ತಿಲ್ಲ" ಎಂದಳಾಕೆ.

ಇಷ್ಟರಲ್ಲಿ ಜಮೀನುದಾರನ ಬಂಧುಜನರು ತಮ್ಮ ಹಂಚಿಕೆ ಎಷ್ಟರವರೆವಿಗೆ ಫಲಿಸಿತೋ ನೋಡಲು ಜಮೀನುದಾರನ ಮನೆಗೆ ಬಂದರು. ಅವರಿಗೆಲ್ಲವನ್ನೂ ತಿಳಿಸಿ ಜಮೀನುದಾರನು ಅವರನ್ನು ಉಗ್ರಾಣದ ಮನೆಗೆ ಕರೆದುಕೊಂಡು ಹೋದನು. ಸತ್ತುಹೋಗಿದ್ದ ಕೋತಿಯನ್ನು ಕೆಳಗಿಳಿಸಿದರು. ಅದು ಮುಕುಂದನಲ್ಲವೆಂದು ಜಮೀನುದಾರನಿಗೆ ಸಂಶಯವಾಯಿತು. ಆದರೆ ಧೂರ್ತರಾದ ಆತನ ಬಂಧುಗಳು "ಮುಕುಂದನಲ್ಲದೆ ಮತ್ತೆ ಯಾರು? ಇವನೇ ನಿನ್ನ ಮಗನೆನ್ನಿಸಿಕೊಂಡಬಿಡು. ವಂಶಗೌರವವನ್ನು ಉಳಿಸಿದನಿನ್ನ ಮಗ" ಎಂದರು. ಜಮೀನುದಾರ ಅವರ ಮಾತು ನಂಬಿದ. ಕೂಡಲೇ ದಹನ ಸಂಸ್ಕಾರ, ಅಂತ್ಯಕ್ರಿಯೆಗಳು ನಡೆದುಹೋದವು. ಮುಂದೆ ವರ್ಷ ಮುಗಿಯುವ ಮುನ್ನವೇ ಜಮೀನುದಾರನು ತೀರಿಕೊಂಡನು. ಆತನ ಆಸ್ತಿಯನ್ನು ಬಂಧುಜನರು ಹರಿದು ಹಂಚಿಕೊಂಡರು.

ತಂದೆ ತೀರಿಕೊಂಡಾಗ ಮುಕುಂದನು ದೂರ ದೇಶದಲ್ಲಿದ್ದ. ಅವನಿಗೆ ಈ ಸುದ್ದಿ ತಿಳಿದಾಕ್ಷಣ ಆಸ್ತಿಯನ್ನು ವಶಪಡಿಸಿಕೊಳ್ಳಲು ಓಡಿಬಂದ.

ಅವನು ತನ್ನ ನೆಂಟರ ಮನೆಗೆ ಹೋಗಿ "ನಮ್ಮ ತಂದೆಯ ಆಸ್ತಿಯನ್ನು ನೀವೆಲ್ಲರೂ ಸೇರಿ ಅಪಹರಿಸಿರುವಿರಿ. ಅದೆಲ್ಲವನ್ನೂ ನನ್ನ ವಶಮಾಡಿ" ಎಂದು ಕೇಳಿದನು.

"ನೀನು ಯಾರು?" ಎಂದನೊಬ್ಬ ಆಸಾಮಿ.

"ನಾನು ಜಮೀನುದಾರನ ಮಗ ಮುಕುಂದ" ಎಂದನು ಮುಕುಂದ ಅವಡುಗಚ್ಚಿ.

"ಅಯ್ಯೋ, ಇನ್ನೆಲ್ಲಿಯ ಮುಕುಂದ. ಅವನು ಸತ್ತು ಸಮಾರು ಒಂದೂವರೆ ವರ್ಷವಾಗಿರಬೇಕು. ಅವನಿಂದ ನಮಗೆಲ್ಲ ಸೂತಕವಿತ್ತು. ಅವನು ಸತ್ತಾಗ ಜಮೀನುದಾರನ ಕೋತಿಯೊಂದು ಕಾಣಿಸಲಿಲ್ಲವೆಂದು ಹೇಳುತ್ತಿದ್ದರು. ನೀನೇ ಆ ಕೋತಿಯಾಗಿರಬೇಕು. ನೀನು ಮುಕುಂದನಲ್ಲ. ಖಂಡಿತವಾಗಿಯೂ ನೀನು ಆ ಕೋತಿಯೇ ಸರಿ. ನಡಿ, ಊಂ! ಹೊರಡಾಚೆ" ಎಂದು ನೆಂಟರೆಲ್ಲರೂ ಸೇರಿ ಅವನನ್ನು ಅಲ್ಲಿಂದ ಓಡಿಸಿಬಿಟ್ಟರು.



# ನಾವಿಕ ಸಿಂದಬಾದ್

ಅವನ ಶವವನ್ನು ಕಂಡು ನನ್ನ ಮನಸ್ಸಿಗೆ ಮತ್ತು ದೇಹಕ್ಕೆ ನೂತನ ಶಕ್ತಿ ಬಂದಂತೆ ತೋರಿತು. ನಾನು ಅತಿ ವೇಗವಾಗಿ ಸಮುದ್ರತೀರದ ಕಡೆ ಓಡಿದೆ. ಅದೃಷ್ಟವಶಾತ್ ನನಗೆ ಕೆಲವು ನಾವಿಕರು ಕಾಣಿಸಿದರು. ತೀರದಲ್ಲಿ ಲಂಗರು ಹಾಕಿದ್ದ ಒಂದು ಹಡಗು ಕಾಣಿಸಿತು. ಹಣ್ಣು ಹಂಪಲು ಗಳಿಗಾಗಿ ಅವರು ಅಲ್ಲಿ ತಂಗಿದ್ದರು. ಅವರು ನನ್ನನ್ನು ಕಂಡು ತುಂಬಾ ವಿಸ್ಮಯಗೊಂಡರು. ನನ್ನ ಬಳಿಗೆ ಬಂದು ಅನೇಕ ಪ್ರಶ್ನೆಗಳನ್ನು ಹಾಕಿದರು. ನನ್ನ ಅನುಭವಗಳನ್ನು ಅವರಿಗೆ ತಿಳಿಸಿದೆ. ಮುದುಕನು ನನ್ನನ್ನು ಪೀಡಿಸಿದ ವಿಷಯ ಅವರಿಗೆ ಹೇಳಲು, "ಆ ಮುದುಕನ ಕೈಯಿಂದ ತಪ್ಪಿಸಿಕೊಂಡೆಯಾ, ಭಲೆ. ಅವನು ಅನೇಕರನ್ನು ತನ್ನ ಕಾಲುಗಳಿಂದ ಅಮುಕಿ ಸಾಯಿಸಿದನು. ಅವನಿಂದ ಯಾರೂ ಇದುವರೆವಿಗೆ ತಪ್ಪಿಸಿಕೊಂಡು ಬಂದಿಲ್ಲ. ನೀನು ಅದೃಷ್ಟ ವಂತ" ಎಂದರು.

ಅವರು ನನ್ನನ್ನು ತಮ್ಮ ಹಡಗಿಗೆ ಕರೆದುಕೊಂಡು ಹೋದರು. ಸರಂಗು ನನಗೆ ಹಾಕಿಕೊಳ್ಳಲು ಬಟ್ಟೆಗಳನ್ನು ಕೊಟ್ಟನು. ಆತನು ನನ್ನ ಕಥೆ ಕೇಳಿದನಂತರ ಹಡಗು ಮುಂದಕ್ಕೆ ಸಾಗಿತು.

ಬಹಳ ದಿನ ಪ್ರಯಾಣಮಾಡಿ ನಾವೊಂದು ನಗರವನ್ನು ತಲುಪಿದೆವು. ಅದು ಬಹಳ ದೊಡ್ಡ ನಗರವೆಂದೂ, ಅನೇಕ

ಐದನೇ ಪ್ರಯಾಣ

CHITRA



ದೇಶಗಳಿಂದ ವರ್ತಕರು ಅಲ್ಲಿಗೆ ಬಂದು ವ್ಯಾಪಾರ ನಡೆಸುವರೆಂದೂ ಸರಂಗ್ ನನಗೆ ಹೇಳಿದನು. ನಗರದ ಸುತ್ತಮುತ್ತಲಿನ ಮರಗಳ ಮೇಲೆ ಬಗೆಬಗೆ ಜಾತಿಯ ಕಪಿಗಳು ವಿಪರೀತವಾಗಿದ್ದುದರಿಂದ ಅದಕ್ಕೆ ಕಪಿಪುರವೆಂದು ಕರೆಯುವುದಾಗಿ ಆತನು ಹೇಳಿದನು.

ಕೋಟೆಗೆ ಹೋದರೆ ಯಾವುದಾದರೂ ಉದ್ಯೋಗ ಲಭಿಸುವುದೆಂದು ಭಾವಿಸಿ, ಒಬ್ಬ ವರ್ತಕನೊಂದಿಗೆ ನಾನು ಹಡಗಿನಿಂದಿಳಿದು ಕೋಟೆಗೆ ಹೋದೆನು. ನನ್ನ ಗೆಳೆಯ ನನ್ನ ಕೈಗೊಂದು ಚೀಲವನ್ನು ಕೊಟ್ಟು "ಈ ಚೀಲದ ತುಂಬಾ ದುಂಡುಕಲ್ಲುಗಳನ್ನು ತುಂಬಿಕೊಂಡು ನಗರದ್ವಾರದಿಂದ ಗುಂಪುಗುಂಪಾಗಿ ಹೊರಗೆ ಬರುವ ಜನರೊಂದಿಗೆ ಸೇರಿಕೊ. ಅವರೆಲ್ಲ ಪಟ್ಟಣಕ್ಕೆ ಕೆಳಗಿರುವ ಕಣಿವೆಗೆ ಹೋಗುವರು. ಅಲ್ಲಿ ಅವರು ಹೇಗೆ ನಡೆದುಕೊಳ್ಳುವರೋ ಅದೇ ರೀತಿ ನೀನೂ ಮಾಡು. ನಿನಗೆ ಒಳ್ಳೆಯ ಲಾಭವಾಗುತ್ತದೆ" ಎಂದ.

ಆತನು ಹೇಳಿದಂತೆ ನಾನು ಚೀಲದತುಂಬಾ ದುಂಡುಕಲ್ಲುಗಳನ್ನು ತುಂಬಿಕೊಂಡೆ. ನಗರ ದ್ವಾರದಬಳಿ ಬರಲು ಒಂದು ಗುಂಪು ಹೊರಗೆ ಬರುತ್ತಿರುವುದು ಕಾಣಿಸಿತು. ಎಲ್ಲರ ಕೈಯಲ್ಲೂ ನನ್ನಲ್ಲಿದ್ದಂತೆಯೇ ಚೀಲಗಳಿದ್ದುವು. ನನ್ನ ಮಿತ್ರನು ಅವರಿಗೆ ನನ್ನ ಪರಿಚಯಮಾಡಿಕೊಟ್ಟು "ಈತನು ಬಡವ. ದೂರದೇಶದವನು. ಈತನಿಗೆ ಜೀವನೋಪಾಯ ತೋರಿಸಿ ಪುಣ್ಯ ಕಟ್ಟಿಕೊಳ್ಳಿ" ಎಂದ.

ನಾವೆಲ್ಲರೂ ಕೊಂಚ ದೂರ ನಡೆದು ಕಣಿವೆಯನ್ನು ಸಮೀಪಿಸಿದೆವು. ಆ ಕಣಿವೆಯಲ್ಲಿ ಎತ್ತರವಾದ ಮರಗಳಿದ್ದುವು. ಅವುಗಳನ್ನೇರಲು ಮನುಷ್ಯರಿಂದ ಸಾಧ್ಯವಿಲ್ಲ. ಅವುಗಳನ್ನು ಕೊಬರಿಮರಗಳೆಂದು ಕರೆಯುತ್ತಾರೆ. ಆ ಮರಗಳ ತುದಿಯಲ್ಲಿ ಕಪಿಗಳೂ, ಕೊಬರಿಕಾಯಿಗಳೂ ಇರುತ್ತವೆ.

ನಾವೆಲ್ಲರೂ ಮರದ ಕೆಳಗೆ ಬಂದು ನಿಂತೆವು. ಉಳಿದವರು ಚೀಲಗಳನ್ನು ನೆಲದಮೇಲಿಟ್ಟು ಕಪಿಗಳಕಡೆ ಕಲ್ಲು ಬೀರುತ್ತಿದ್ದರು. ನಾನೂ ಅದೇ ರೀತಿ ಮಾಡಿದೆ. ಕಪಿಗಳು ಸಿಟ್ಟುಗೊಂಡು ಕಾಯಿಗಳನ್ನು ಕಿತ್ತು ನಮ್ಮಕಡೆ ಎಸೆಯಲಾರಂಭಿಸಿದುವು. ನಾವು ಕೆಳಗೆ ಬಿದ್ದ ಕಾಯಿಗಳನ್ನು ಆರಿಸಿ ಚೀಲಗಳಲ್ಲಿ ತುಂಬಿಕೊಂಡೆವು. ಚೀಲದ

ತುಂಬಾ ಕಾಯಿಗಳು ತುಂಬಿದಕೂಡಲೇ ಭುಜದ ಮೇಲೆ ಹಾಕಿಕೊಂಡು ನಗರಕ್ಕೆ ಬಂದೆವು. ಅಲ್ಲಿ ನನ್ನ ಗೆಳೆಯ ವರ್ತಕನು ನಾನು ತೆಗೆದುಕೊಂಡು ಹೋದ ಕಾಯಿಗಳನ್ನೆಲ್ಲಾ ಬೆಲೆಗೆ ತೆಗೆದು ಕೊಂಡನು. ಈ ರೀತಿ ನಾನು ದಿನಾ ಕಣಿವೆಗೆ ಹೋಗಿ ಕಾಯಿಗಳನ್ನು ಆರಿಸಿ ತಂದು ಬೆಲೆಗೆ ಮಾರಿ ಕೊಂಚ ಹಣವನ್ನು ಸೇರಿಸಿ, ಅದನ್ನೇ ಬಂಡವಾಳವಾಗಿಟ್ಟು ಕ್ರಯವಿಕ್ರಯಗಳನ್ನು ಮಾಡಿ, ಹವಳದ್ವೀಪಕ್ಕೆ ಹೋಗಲು ಸಾಕಾಗು ವಷ್ಟು ಹಣಮಾಡಿಕೊಂಡೆ.

ನನ್ನೊಂದಿಗೆ ಯಥೇಚ್ಛವಾಗಿ ಕಾಯಿಗಳನ್ನು ತೆಗೆದುಕೊಂಡು ಪ್ರಯಾಣ ಹೊರಟೆನು. ದಾರಿ ಯಲ್ಲಿ ಸಿಕ್ಕಿದ ರೇವುಗಳಲ್ಲಿ ಅವುಗಳನ್ನು ಮಾರಿ ಲವಂಗಪಟ್ಟೆ, ಮೆಣಸು ಮುಂತಾದುವನ್ನು ಕೊಂಡುಕೊಂಡೆ. ಹವಳದ ದ್ವೀಪವನ್ನು ಸೇರು ವಷ್ಟರಲ್ಲಿ ಈ ಸರಕನ್ನು ತುಂಬಾ ಲಾಭಬರು ವಂತೆ ಮಾರಿಬಿಟ್ಟೆ. ಹವಳದ ದ್ವೀಪಕ್ಕೆ ಹೋಗಿ ಸೇರಿದಮೇಲೆ ಅಲ್ಲಿ ಮುತ್ತು ಆರಿಸುವವರನ್ನು ಸಂಬಳಕ್ಕೆ ಗೊತ್ತುಮಾಡಿದೆ. ನನ್ನ ಅದೃಷ್ಟ ನೆಟ್ಟಗಿತ್ತು. ನನಗೆ ಆವರು ಆರಿಸಿ ತಂದು ಕೊಟ್ಟ ಮುತ್ತಿನ ಚಿಪ್ಪುಗಳಲ್ಲಿ ಅತ್ಯುತ್ತಮ ವಾದ ಮುತ್ತುಗಳಿದ್ದುವು. ಅವುಗಳನ್ನು ಅಲ್ಲಿನ ವರ್ತಕರಿಗೆ ಮಾರಿ ಲಾಭ ಗಿಟ್ಟಿಸಿದೆ. ಈ ರೀತಿ ಕೆಲವು ದಿನಗಳಿಗೆಲ್ಲಾ ನಾನು ಅಪಾರ ಹಣ ಸಂಪಾದಿಸಿದೆ.

ಆ ವೇಳೆಗೆ ನನಗೆ ಮನೆಯ ಕಡೆ ಧ್ಯಾನ ಹೋಯಿತು. ನಾನು ಹಿಂತಿರುಗಲು ತಕ್ಕ ಏರ್ಪಾಟುಗಳನ್ನು ಮಾಡಿಕೊಂಡೆ. ದಾರಿಯಲ್ಲಿ ಸಿಕ್ಕಿದ ಪ್ರತಿ ರೇವಿನಲ್ಲೂ ಮಾರಾಟಮಾಡಲು ಅನೇಕ ವಿಧವಾದ ವಸ್ತುಗಳನ್ನು ಕೊಂಡು ಕೊಂಡೆ. ಪ್ರತ್ಯೇಕವಾಗಿ ಒಂದು ಹಡಗನ್ನು ಗೊತ್ತುಮಾಡಿ, ಸರಕನ್ನೆಲ್ಲಾ ಅದರಲ್ಲಿ ತುಂಬಿ ಕೊಂಡು, ಪ್ರತಿ ರೇವಿನಲ್ಲೂ ವ್ಯಾಪಾರ ಸಾಗಿ ಸುತ್ತಾ ಬಾಗ್ದಾದ್ ನಗರವನ್ನು ಸೇರಿಕೊಂಡೆ.

ನಾನು ಮನೆಗೆ ಹಿಂತಿರುಗಿ ಬಂದೆನೆಂದು ನನ್ನ ಬಂಧುಮಿತ್ರರು ತಮ್ಮ ಸಂತೋಷ ವ್ಯಕ್ತಪಡಿಸಿದರು. ನನ್ನಬಳಿ ಯಥೇಚ್ಛವಾಗಿ ಹಣವಿದ್ದುದರಿಂದ ಅನೇಕ ಬಡಬಗ್ಗರಿಗೆ, ನೆಂಟ ರಿಷ್ಟರಿಗೆ ದಾನಧರ್ಮಗಳನ್ನು ಮಾಡಿ, ಯಥಾ ಪ್ರಕಾರ ಸುಖವಾಗಿ ಜೀವನಮಾಡುತ್ತಿದ್ದೆ.





# ಕೆಲಸಕ್ಕೆ ಬಾರದ ಮಿತ್ರರು

ಒಂದಾನೊಂದು ದೇಶದಲ್ಲಿ ಒಬ್ಬ ಶ್ರೀಮಂತ ನಿದ್ದನು. ಅವನಿಗೆ ಒಬ್ಬನೇ ಮಗ. ಅವನು ಬೆಳೆದು ದೊಡ್ಡವನಾಗಲು ತಂದೆ ಅವನೊಂದಿಗೆ "ತಮ್ಮಾ, ಜೀವನದಲ್ಲಿ ಎಲ್ಲಕ್ಕಿಂತಲೂ ಅಮೂಲ್ಯವಾದುದು ಸ್ನೇಹ. ಹಣ ಸಂಪಾದಿಸಬಹುದು, ಕೀರ್ತಿಪಡೆಯುಬಹುದು. ಆದರೆ ಸ್ನೇಹಿತನನ್ನು ಪಡೆಯುವುದು ತುಂಬಾ ಕಷ್ಟ. ಆದುದರಿಂದ ನೀನು ಹೇಗಾದರೂ ಉತ್ತಮ ಸ್ನೇಹಿತರನ್ನು ಸಂಪಾದಿಸಲು ಪ್ರಯತ್ನಿಸು" ಎಂದು ಬುದ್ಧಿ ಹೇಳಿದನು.

ಅಂದಿನಿಂದ ಮಗನು ಉತ್ತಮ ಸ್ನೇಹಿತರನ್ನು ಪಡೆಯಲು ಪ್ರಯತ್ನಿಸಿದನು. ಕೂಡಲೇ ಅನೇಕ ಜನ ಯುವಕರು ಅವನ ಸುತ್ತು ಸೇರಿದರು. ಅವರೆಲ್ಲರೂ ಅವನೊಂದಿಗೆ ಅತಿ ಪ್ರೀತಿಯಿಂದಾಡುತ್ತಾ, ಅವನಿಗಾಗಿ ತಮ್ಮ ಆಸ್ತಿಯನ್ನೆಲ್ಲಾ ಧಾರೆಯೆರೆಯಲು ಸಿದ್ಧರಿರುವಂತೆ ಮಾತನಾಡುತ್ತಿದ್ದರು.

ಕೊಂಚ ದಿನಗಳಾದನಂತರ ತಂದೆ ಮಗನನ್ನು ಕುರಿತು "ತಮ್ಮಾ, ನಿನಗೆ ಯಾರಾದರೂ ಸ್ನೇಹಿತರು ಸಿಕ್ಕಿದರೇ?" ಎಂದು ಕೇಳಿದನು.

"ಸಿಕ್ಕಿದ್ದಾರೆ ಅಪ್ಪಾಜಿ. ನನಗೆ ಅನೇಕ ಗೆಳೆಯರಿದ್ದಾರೆ" ಎಂದು ಉತ್ಸಾಹದಿಂದ ಹೇಳಿದ ಮಗ.

"ಅಂದರೆ ಅವರೆಲ್ಲ ನಿನ್ನ ಪ್ರಾಣಮಿತ್ರರೇ?" ಎಂದು ಕೇಳಿದ ತಂದೆ ಆಶ್ಚರ್ಯದಿಂದ.

ಮಗನು ತುಸಹೊತ್ತು ಆಲೋಚಿಸಿ ಅವರಲ್ಲಿ ಗಾಢ ಸ್ನೇಹಿತರು ಹತ್ತು ಜನರಾದರೂ ಇದ್ದಾರೆಂದು ಹೇಳಿದನು.

"ನಾನಿಷ್ಟು ವರ್ಷ ಜೀವಿಸಿದ್ದರೂ ನನಗೆ ಕೇವಲ ಇಬ್ಬರು ಸ್ನೇಹಿತರಿದ್ದಾರೆ. ಇಷ್ಟು ಬೇಗ ನೀನು ಹತ್ತು ಜನ ಸ್ನೇಹಿತರನ್ನು ಪಡೆದೆ ನನಗೆ ನಂಬಲಸಾಧ್ಯವಾಗಿದೆ" ಎಂದ ತಂದೆ.

ಮಗನು ತನ್ನ ಸ್ನೇಹಿತರ ಪರವಹಿಸಿ ಅವರು ತನಗಾಗಿ ಪ್ರಾಣತ್ಯಾಗ ಮಾಡಲೂ ಸಿದ್ಧರಿರುವರೆಂದು ತಂದೆಯೊಂದಿಗೆ ವಾದಿಸಿದನು.

"ಅದನ್ನು ರುಜುವಾತು ಮಾಡುವುದೇನೂ ಕಷ್ಟಕರವಲ್ಲ" ಎಂದ ತಂದೆ. "ನೀನುಮಾತ್ರ ನಾನು ಹೇಳಿದಪ್ರಕಾರ ನಡೆದುಕೊಳ್ಳಬೇಕು.

ಜಿ. ಸದಾನಂದರಾವ್



ಒಂದು ಹಂದಿಯನ್ನು ಕೊಂದು ಗೋಣಿಯಲ್ಲಿ ಹಾಕಿ, ಭುಜದಮೇಲಿಟ್ಟುಕೊಂಡು ರಹಸ್ಯವಾಗಿ ಪ್ರತಿಯೊಬ್ಬ ಮಿತ್ರನ ಮನೆಗೆ ಹೋಗಿ, ನೀನು ಕೋಪಾವೇಶದಲ್ಲಿ ಒಬ್ಬ ವ್ಯಕ್ತಿಯನ್ನು ಕೊಂದೆಯೆಂದು ಅವರೊಂದಿಗೆ ಹೇಳು. ಈ ವಿಷಯ ಹೊರಗೆ ತಿಳಿದರೆ ನಿನಗೆ ಪಾಶಿ ಶಿಕ್ಷೆಯಾಗುವುದೆಂದೂ, ನಿನಗೆ ಸಹಾಯಮಾಡಿದವರಿಗೂ ಶಿಕ್ಷೆಯಾಗುವ ಸಂಭವವಿದೆ ಎಂದೂ ತಿಳಿಸಿ, ನಂತರ ನಿನ್ನನ್ನು ಕಾಪಾಡುವಂತೆ ಅವರನ್ನು ಕೇಳು. ಮುಂದೆ ಏನು ನಡೆಯುವುದೋ ನೋಡೋಣ"

ಮಗನು ಅದರಂತೆಯೇ ಮಾಡಿದ. ಅವನು ಒಂದು ಹಂದಿಯನ್ನು ಕೊಂದು, ಗೋಣಿಚೀಲದಲ್ಲಿ ತುರುಕಿ ಕಟ್ಟಿ, ಭುಜದಮೇಲಿಟ್ಟುಕೊಂಡು ಪ್ರತಿ ಸ್ನೇಹಿತನ ಮನೆಗೂ ಹೋಗಿ ತನ್ನ ತಂದೆ



ಹೇಳಿಕೊಟ್ಟಂತೆ ಮಾಡಿದ. ಅವನಿಗೆ ಸಹಾಯ ಮಾಡಲು ಯಾರೂ ಮುಂದೆ ಬರಲಿಲ್ಲ.

"ಈ ಪರಿಸ್ಥಿತಿಯಲ್ಲಿ ನಾನು ನಿನಗೇನು ಸಹಾಯಮಾಡಬಲ್ಲೆ. ಈ ಶವದೊಂದಿಗೆ ನಮ್ಮ ಮನೆಗೆ ಬಂದಿರುವ ವಿಷಯ ಯಾರಿಗಾದರೂ ತಿಳಿದಿದೆಯೇ? ಹಾಗಿದ್ದರೆ ನಿನ್ನನ್ನು ರಕ್ಷಿಸುವುದು ಒತ್ತೊಟ್ಟಿಗಿರಲಿ, ನಾನೂ ಅನವಸರವಾಗಿ ತೊಂದರೆಗೆ ಸಿಲುಕಿಕೊಳ್ಳ ಬೇಕಾಗುತ್ತದೆ" ಎಂದನೊಬ್ಬ ಸ್ನೇಹಿತ.

"ನಿನಗಾಗಿ ನಾನು ಗಲ್ಲಿಗೇರಲು ಸಿದ್ಧನಾಗಿರುವೆನು. ಆದರೆ ಅದರಿಂದ ನಿನಗೇನೂ ಪ್ರಯೋಜನವಾಗಲಾರದು. ಏನು ಮಾಡಲಿ?" ಎಂದ ಇನ್ನೊಬ್ಬ ಸ್ನೇಹಿತ.

"ನಿನ್ನ ಈ ದುರವಸ್ಥೆ ಕಂಡು ನನಗೆ ತುಂಬಾ ವ್ಯಥೆಯಾಗುತ್ತಿದೆ. ಈ ಜೀವವಿರುವ ವರೆವಿಗೂ ನಿನ್ನನ್ನು ನಾನು ಮರೆಯಲಾರೆ" ಎಂದ ಮತ್ತೊಬ್ಬ.

"ನಿನ್ನನ್ನು ಅಧಿಕಾರಿಗಳು ಗಲ್ಲಿಗೇರಿಸಿದ ನಂತರ ನಿನ್ನ ಶವಕ್ಕೆ ಅಲಂಕಾರಮಾಡಿ ಮೆರವಣಿಗೆ ಮಾಡಿಸಿ ನಿನ್ನ ಅಂತ್ಯಕ್ರಿಯೆಗಳನ್ನು ಬಹಳ ವೈಭವದಿಂದ ನಡೆಯಿಸುವೆನು" ಎಂದ ನಾಲ್ಕನೇಯ ಗೆಳೆಯ.

ಹೀಗೇ ಒಬ್ಬೊಬ್ಬರು ಒಂದು ರೀತಿ ಮಾತನಾಡಿದರು. ಅನಂತರ ಮಗನು ತಂದೆಯಬಳಿಗೆ ಬಂದು ತನ್ನ ಸ್ನೇಹಿತರು ಹೇಳಿದ ಮಾತುಗಳನ್ನೆಲ್ಲಾ ಹೇಳಿದ. ಶಾಂತಚಿತ್ತದಿಂದ ಇದೆಲ್ಲವನ್ನೂ ಕೇಳಿದ ತಂದೆ "ನಾನು ಹೀಗಾಗುವು





ಡೆಂದು ಮೊದಲೇ ಎಣಿಸಿದ್ದೆ. ಇದರಲ್ಲೇನೂ ಆಶ್ಚರ್ಯವಿಲ್ಲ. ನನಗೆ ಕೇವಲ ಇಬ್ಬರೇ ಸ್ನೇಹಿತರಿರುವರೆಂದು ಹೇಳಿದ್ದೆನಷ್ಟೆ. ಅವರು ನಿನಗೆ ಯಾವ ರೀತಿ ಸಹಾಯ ಮಾಡುವರೋ ನೋಡೋಣ" ಎಂದ.

ತಂದೆಯ ಸಲಹೆಯಂತೆ ಮಗನು ಗೋಣಿ ಚೀಲವನ್ನು ಭುಜದಮೇಲೆ ಹಾಕಿಕೊಂಡು ತನ್ನ ತಂದೆಯ ಸ್ನೇಹಿತನೊಬ್ಬನ ಮನೆಗೆ ಹೋಗಿ, ತನ್ನ ಗೆಳೆಯರೊಂದಿಗೆ ಆಡಿದ ಆಟವನ್ನೇ ಆಡಿದ. ಆತನು ಎಲ್ಲವನ್ನೂ ಕೇಳಿದ ನಂತರ,

"ನಾನು ನಿನ್ನನ್ನು ಅರಿಯೆ. ಆದರೆ ನಿನ್ನ ತಂದೆ ನನ್ನ ಗೆಳೆಯ. ಆತನಿಗಾಗಿ ನಾನು ನಿನಗೆ ಸಹಾಯಮಾಡುವೆನು" ಎಂದ. ತರುವಾಯ ಆತನು ಹಂದಿಯಿದ್ದ ಗೋಣಿಯನ್ನು ರಹಸ್ಯವಾಗಿ ಒಯ್ದು ತನ್ನ ಮನೆ ಹಿತ್ತಲಲ್ಲಿ ಹೂತಿಟ್ಟು "ತಮ್ಮಾ, ನೀನೇನೂ ಭಯಪಡಬೇಡ. ನಿಶ್ಚಿಂತೆಯಿಂದಿರು" ಎಂದ.

ಈ ವಿಷಯ ಮಗನಿಂದ ತಿಳಿದ ತಂದೆ ಆ ಊರಿನ ತಳವಾರನಿಗೆ ತನ್ನ ನೌಕರನ ಮೂಲಕ ಒಂದು ಸುದ್ದಿ ಕಳುಹಿಸಿದ.

ನೌಕರನು ತಳವಾರನೊಂದಿಗೆ "ಸ್ವಾಮಿ, ನಮ್ಮ ಯಜಮಾನರ ಮಗ ಯಾರನ್ನೋ ಕೊಲೆ ಮಾಡಿ, ಗೋಣಿಚೀಲದಲ್ಲಿಟ್ಟು ಇಂಥವರ ಮನೆಗೆ ತೆಗೆದುಕೊಂಡು ಹೋದನು. ಆತನು ಆ ಚೀಲವನ್ನು ತನ್ನ ಮನೆಯ ಹಿತ್ತಲಲ್ಲಿ ಹೂತಿಟ್ಟು, ನಮ್ಮ ಯಜಮಾನರ ಮಗನನ್ನು ಕಾಪಾಡಿದ್ದಾನೆ" ಎಂದು ಹೇಳಿದನು. ಇದನ್ನು ಕೇಳಿದ ಕೂಡಲೇ ತಳವಾರನು ಭಟರನ್ನು ಕಳುಹಿಸಿ



ಹಿತ್ತಲಲ್ಲಿ ಹುಡುಕಿಸಲು ಗೋಣಿಚೀಲ ಸಿಕ್ಕಿತು. ಧನಿಕನ ಸ್ನೇಹಿತನು ತಳವಾರನೊಂದಿಗೆ "ಅಯ್ಯಾ ಆ ಹುಡುಗ ನಮ್ಮ ಮನೆಗೆ ಬಂದು ತಾನು ಇಂತಹವರ ಮಗನೆಂದು ಹೇಳಿದ ವಿಷಯ ನಿಜ. ಆ ಹುಡುಗನನ್ನು ನಾನು ಆಗಲೇ ಮೊದಲನೇಸಾರಿ ನೋಡಿದ್ದು. ಹಿಂದೆಂದೂ ನೋಡಿರಲಿಲ್ಲ. ಒಂದುವೇಳೆ ನನಗೆ ತಿಳಿಯದಂತೆ ಆ ಹುಡುಗನು ನಮ್ಮ ಮನೆ ಹಿತ್ತಲಲ್ಲಿ ಗೋಣಿಚೀಲವನ್ನು ಹೂತಿಟ್ಟಿರಬಹುದು. ನನಗೆ ಈ ವಿಷಯವೇನೂ ಗೊತ್ತಿಲ್ಲ" ಎಂದ.

ಇಷ್ಟರಲ್ಲಿ ಧನಿಕನ ಮಗನು ತನ್ನ ತಂದೆಯ ಮತ್ತೊಬ್ಬ ಗೆಳೆಯನ ಮನೆಗೆ ಹೋಗಿ "ಅಯ್ಯಾ, ನಾನು ಕೋಪದ ಭರದಲ್ಲಿ ಒಬ್ಬ ಮನುಷ್ಯನನ್ನು ಕೊಲೆ ಮಾಡಿದೆ. ನಮ್ಮ ತಂದೆಯ ಸ್ನೇಹಿತರೊಬ್ಬರು ಶವವಿದ್ದ ಗೋಣಿಚೀಲವನ್ನು ತಮ್ಮ ಮನೆಯ ಹಿತ್ತಲಲ್ಲಿ ಗೋಪ್ಯವಾಗಿ ಹೂತಿಟ್ಟು ನನ್ನನ್ನು ಕಾಪಾಡಿದರು. ಆದರೆ ಆ ವಿಷಯ ಹೇಗೋ ಅಧಿಕಾರಿಗಳಿಗೆ ತಿಳಿದುಬಿಟ್ಟಿತು. ನನಗೆ ಘಾಸಿಶಿಕ್ಷೆ ತಪ್ಪುವಂತಿಲ್ಲ. ಯಾವ ರೀತಿಯಿಂದಲಾದರೂ ನನಗೆ ಸಹಾಯ ಮಾಡಬಲ್ಲಿರಾ?" ಎಂದು ಕೇಳಿದ. ಕೂಡಲೇ ಧನಿಕನ ಸ್ನೇಹಿತನು ಬೇಗಬೇಗನೇ ತಳವಾರನ ಮನೆಗೆ ಹೋಗಿ "ಅಯ್ಯಾ, ಇಂತಹ ಧನಿಕನ ಮಗನಮೇಲೆ ಹತ್ಯಾರೋಪ ಹೊರಿಸಿದಂತೆ ಸಮಾಚಾರ ಕೇಳಿರುವೆನು. ಆದರೆ ನಿಜವಾಗಿ ಆತನಲ್ಲ ಕೊಲೆಗಾರ. ನನ್ನ ಮಗ. ಒಬ್ಬರು ಮಾಡಿದ ತಪ್ಪಿಗೆ ಮತ್ತೊಬ್ಬರನ್ನು ಶಿಕ್ಷಿಸುವುದು ನ್ಯಾಯವಲ್ಲ. ಮನಸ್ಸಿಲ್ಲದಿದ್ದರೂ ನಿಜ ಹೇಳಬೇಕಾಗಿ ಬಂತು. ಆ ಹುಡುಗನನ್ನು ಬಿಟ್ಟು ನನ್ನ ಮಗನನ್ನು ಗಲ್ಲಿಗೇರಿಸಿ" ಎಂದ.

ಧನಿಕನಿಗೆ ಈ ಸಮಾಚಾರ ತಿಳಿದಕೂಡಲೇ ಮಗನೊಂದಿಗೆ "ತಮ್ಮಾ, ನಿಜಸ್ನೇಹಿತರು ಸಮಯ ಬಂದಾಗ ಹೇಗೆ ಸಹಾಯ ಮಾಡುವರೋ ನೋಡಿದೆಯಾ? ಪ್ರತಿಯೊಬ್ಬರನ್ನೂ ಸ್ನೇಹಿತರೆಂದು ನಂಬದಿರು" ಎಂದು ಹೇಳಿದನು. ನಟ್ಟಿಗೆ ತಳವಾರನ ಮನೆಗೆ ಹೋಗಿ ನಡೆದುದನ್ನೆಲ್ಲಾ ತಿಳಿಸಿ ಈ ಗೋಣಿಚೀಲದಲ್ಲಿರುವುದು ಮನುಷ್ಯನಲ್ಲ, ಹಂದಿ. ಗೋಣಿಯನ್ನು ಬಿಚ್ಚಿ ನೋಡಿ" ಎಂದ. ತಳವಾರನು ಗೋಣಿ ಬಿಚ್ಚಿ ನೋಡಿ ಆಶ್ಚರ್ಯಗೊಂಡನು.





# ಮಿತ್ರಭೇದ

ಕೇಳಿಯಾ ಕತೆಯನ್ನು
ಪೇಳಿದನು ಕರಟಕನು
" ನರಿಯಣ್ಣ, ದಮನಕಾ !
ನೀ ನುರಿತ ನರಿಯಣ್ಣ !
ಪೋಗು, ಪಿಂಗಲಕ - ಸಂ
ಜೀವಕರ ಮೈತ್ರಿಯನು
ಭೇದ ನೀತಿಯಲಿ ಪೀ
ಳಿಸು, ಪೋಗು, ಗೆದ್ದುಬಾ !"
ಹೊರಟು ನರಿ ದಮನಕನು
ಮೃಗರಾಜನೆಡೆಗೆಯ್ದು
ತಕ್ಕಸಮಯವ ಹೊಂಚಿ,
ರಾಜನೋರ್ವನೆ ಇರುವ
ಹೊತ್ತರಿತು ಬಳಿಸಾರಿ,
ಮಣಿದು ಬಲು ವಿನಯದಲಿ
ಅರಸನಾ ಕುಶಲವನು
ಕೇಳೆ " ಓ ದಮನಕಾ,
ಬಹಳ ಕಾಲಕೆ ಬಂದೆ
ಯೇನೆ?"ಂದು ಕೇಳಿದನು.

ದಮನಕನು ಇಂತೆಂದ:
ದೊರೆಗಳಿಗೆ ನಮ್ಮಲ್ಲಿ
ಕೆಲಸ ವಿಲ್ಲೆಂದರಿತು
ಬರಲಿಲ್ಲ, ಮತ್ತೀಗ
ಇರುವ ಪಾಯವಕಂಡು
ಕರೆಯದಲೆ ಬಂದೆನಾ !
ಅಶುಭ, ಅಪ್ರಿಯವಾದ
ವಿಷಯ ವಿದು, ಹಿಂಜರಿದೆ.
ಮಿತಿಮೀರುವುದ ಕಂಡು
ಬಂದೆ, ಮನ್ನಿಸಬೇಕು "
" ಏನು ಸಂಗತಿ ?" ಎಂದು
ಕೇಳಿದನು ಪಿಂಗಳಕ.
" ಏನ ಪೇಳಲಿ ದೊರೆಯೆ !
ಸಂಜೀವಕನು ನಿಮಗೆ
ಕೇಡು ಬಗೆವುದ ನರಿತೆ !
ನೀವರಿಯದಂತೆಯೇ
ಈ ಕಾನನಕ್ಕೆಲ್ಲ
ತಾನೆ ಹಿರಿಯವನಂತೆ !

ಟಿ. ಎ. ಶರ್ಮ



ಸಂಜೀವಕನು, ಈಗ
ನಿಮ್ಮ ಸಾನ್ನಿಧ್ಯದಿಂ
ಹೆಮ್ಮೆಯೊಡ ಗೂಡಿಹನು!"
ಕೇಳಿ ದೊರೆ ಇಂತೆಂದ.
"ದಮನಕಾ, ನಾನೀಗ
ನಿನ್ನ ಮಾತನು ಕೇಳಿ
ನಂಬಿರುವ ಮಿತ್ರನನು
ತೊಲಗಿಸುವು ದದು ಸರಿಯೆ?
ಅಪಕಾರಿಗಾದರೂ
ಉಪಕಾರ ಗೈವುದೇ
ಶ್ರೇಷ್ಠ ಗುಣವಲ್ಲವೆ?
ಅವನ ದ್ರೊಹವು ಎನ್ನ
ನೇನು ಮಾಡೀತಯ್ಯ?"
ಇದಕೆ ದಮನಕನೆಂದ:
"ಹಾಗಲ್ಲ, ಓದೊರೆಯೆ?
ರಾಜದಂಡವು ತಾನೆ
ರಾಜನಿಗೆ ಅಧಿಕಾರ?
ನೀವು ಸಂಜೀವಕನ
ಸ್ನೇಹಮಾಡಿದಮೇಲೆ
ಮಾಂಸದಶನವ ಬಿಟ್ಟು,
ಶೌರ್ಯ ಸಾಹಸ ಬಿಟ್ಟು,
ಆತನಂತಾಗುತ್ತ
ಲಿರುವಿರೈ! ಅರಿಯಿರಾ?
ಅವನತಂತ್ರದಿ ನಿಮಗೆ

ಮೆಲ್ಲನಂಬಿಸಿ ನಿಮ್ಮ
ಕೊಲ್ಲಲಿರುವನು ಮುಂದೆ!
ಸ್ನೇಹದಿಂದಿದ್ದರೂ
ವಿಸ್ತಾರ ರಾಜ್ಯವಿದು;
ಆಸೆ ಬರುವುದು ಸಹಜ.
ಮಿತ್ರನಲಿ ಸಂದೇಹ
ಪಡಬಾರದೆಂಬುದೇ
ಹಿತಶತ್ರುವಾಗುವಂ
ತಾಯ್ತಾಗ ಕಾಣಿರೇ!
ಅರಸ ಗೆಳೆಯರಮೇಲೆ
ಅತಿ ನಂಬುಗೆಯ ನಿಡಲು
ದ್ರೋಹಬುದ್ಧಿಗೆ ದಾರಿ!
ಮೋಸ ಬರುವುದು ಕಡೆಗೆ!
ಹುಲ್ಲು ಮೇಯುವ ಪಶುವು

ಸಾಧುತನ ಬರುತಿಹುದು
ಅವನಿಂದ ನೀವ್‌ನಾಶ
ವಾಗಬಹುದೇ ದೊರೆಯೆ?
ತಗಣೆಯಿಂದಲಿ ಹೇನು
ಸತ್ತ ಕಥೆ ಅರಿಯಿರಾ?
ನೀವೀಗ ಎಚ್ಚರವ
ತಾಳಬೇಕೈ ಸ್ವಾಮಿ!
ಒಳ್ಳೆ ಸಮಯವ ಕಾದು
ಕೊಲ್ಲಬೇಕಾ ಪಶುವ!
ತಮ್ಮಹಿತ ಚಿಂತನೆಯೆ
ಎನ್ನಯೋಚನೆಸದಾ!
ಈ ಪಶುವು ತಾಪೋಗಿ
ಮನುಜರನು ಕರೆತರಲ್
ನಿಮ್ಮಾಟ ಮುಗಿದಂತೆ!
ಹಿಂದೊಬ್ಬ ರಾಜ ನಿಂ
ತೇ ಸಾಯಲಿಲ್ಲವೇ?
ಕೇಳಬೇಕಾ ಕಥೆಯ:
ಹಿಂದೊಂದು ವನದಲ್ಲಿ
ಚಂಡರವನೆಂಬೊಂದು
ನರಿಯಿತ್ತು; ಒಮ್ಮೆಯದು
ತಿಂಡಿಯನು ಅರಸುತ್ತ
ಏನೊಂದು ದೊರೆಯದಲೆ
ಪಟ್ಟಣದ ಬಳಿಸಾರೆ,
ಊರನಾಯ್ಗಳು ಸೇರಿ



ಬಗುಳಿ ಓಡಿಸಿಬರಲು,
ಒಂದು ಅಗಸನ ಗುಡಿಸ
ಲೊಳಗೆ ನುಸುಳಿತು ಬೇಗ.
ನಾಯ್ಗಳಲ್ಲಿಗೆ ಬರಲು
ನರಿ ಬೆದರಿ, ಅಲ್ಲಿದ್ದ
ನೀಲಿರಂಗಿನ ಬಾನೆ
ಯೊಳುಬಿತ್ತು ತಿಳಿಯದೇ!
ನೀಲನರಿಯನು ನೋಡಿ
ನಾಯ್ಗಳಂಜೋಡಿದುವು!
ಇತರ ಮೃಗಗಳು ಕೂಡ
ನೀಲ ನರಿಯನು ಕಂಡು
ಅಂಜಿಸಾರಿದುವತ್ತ!



# ಅಸೂಯೆ

ಒಂದು ಗ್ರಾಮದಲ್ಲಿ ಬಲಭದ್ರನೆಂಬ ಒಬ್ಬ ಬಡರೈತನಿದ್ದನು. ಅವರಿಗೆ ಬಹುಮಂದಿ ಮಕ್ಕಳಿದ್ದರು. ಬಲಭದ್ರನು ದಿನಾ ಕಾಡಿಗೆ ಹೋಗಿ ಸೌದೆಯನ್ನು ಕಡಿದು ತರುವನು. ಅದನ್ನು ಮಾರಿ ಬಂದ ಚಿಲ್ಲರೆಹಣದಿಂದ ಮಕ್ಕಳಿಗಷ್ಟು ಗಂಜಿ ಕುಡಿಸಿ, ತಾನೂ ತನ್ನ ಹೆಂಡತಿ ಸಹ ಕುಡಿಯುವರು. ಬಲಭದ್ರನು ಎಷ್ಟೇ ಕಷ್ಟ ಪಟ್ಟರೂ ಒಪ್ಪೊತ್ತು ದಂಡಿಯಾಗಿ ಊಟ ಅವನ ಕುಟುಂಬಕ್ಕೆಲ್ಲಾ ಸಿಕ್ಕುತ್ತಿರಲಿಲ್ಲ.

ಒಂದು ದಿನ ಬೆಳಗ್ಗೆ ಬಲಭದ್ರನು ಕೊಡಲಿಯನ್ನು ಭುಜದಮೇಲಿಟ್ಟುಕೊಂಡು ಕಾಡಿಗೆ ಹೊರಟನು. ದಾರಿಯಲ್ಲಿ ಹನಿ ಬೀಳಲಾರಂಭಿಸಿ, ಅವನು ಗಮ್ಯಸ್ಥಾನವನ್ನು ಸೇರುವವೇಳೆಗೆ ಧಾರಾಕಾರವಾಗಿ ಮಳೆ ಸುರಿಯಲಾರಂಭಿಸಿತು. ಅದೃಷ್ಟವಶಾತ್ ಅಡವಿಯಲ್ಲಿ ಅವನಿಗೆ ಒಂದು ಪಾಳುಬಿದ್ದ ಚಾವಡಿ ಕಾಣಿಸಿತು. ಅವನು ಅಲ್ಲಿಗೆ ಹೋಗಿ ಮಳೆ ನಿಲ್ಲುವುದನ್ನೇ ಕಾದುಕೊಂಡಿದ್ದ.

"ಮಳೆ ಎಷ್ಟು ಹೊತ್ತಾದರೂ ನಿಲ್ಲಲಿಲ್ಲ. ಒಣಗಿದ ಸೌದೆಯೆಲ್ಲಾ ಒದ್ದೆಯಾಯಿತು. ಹಸಿ ಸೌದೆಯನ್ನು ತೆಗೆದುಕೊಂಡು ಹೋದರೆ ಯಾರೂ ಕೊಂಡುಕೊಳ್ಳಲಾರರು. ನಾನೊಂದು ನತದೃಷ್ಟ. ಇಂದು ಮಕ್ಕಳಿಗೆ ಗಂಜಿಯೂ ಸಿಗುವಂತಿಲ್ಲ" ಎಂದು ಬಲಭದ್ರನು ಒಂದುಸಾರಿ ಸುತ್ತಲೂ ತನ್ನ ದೃಷ್ಟಿಯನ್ನು ಬೀರಿದನು. ಅವನಿಗೆ ಒಂದು ಮೂಲೆಯಲ್ಲಿ ಮರದ ವಿಗ್ರಹವೊಂದು ಕಾಣಿಸಿತು. ಹತ್ತಿರಹೋಗಿ ನೋಡಲು ಅದು ದೇವಿಯ ವಿಗ್ರಹವಾಗಿತ್ತು.

ಅಮ್ಮನವರ ವಿಗ್ರಹವಾದರೇನು, ಅಯ್ಯನವರ ವಿಗ್ರಹವಾದರೇನು? ಅದೊಂದು ವಿಗ್ರಹ. ಮಳೆಯಿಂದ ಒದ್ದೆಯಾಗಿಲ್ಲ. ಸೀಳಿದರೆ ಒಂದು ಹೊರೆ ಸೌದೆಯಾಗುತ್ತದೆ. ಅಡವಿಯಲ್ಲೆಲ್ಲಾ ಹುಡುಕಾಡಿದರೂ ಬೇರೆ ಒಣಗಿದ ಸೌದೆ ಸಿಗುವಂತಿಲ್ಲ. ಈ ಸೌದೆಯನ್ನು ಸೀಳಿ ತೆಗೆದುಕೊಂಡು ಹೋದರೆ ನಾಲ್ಕು ಕಾಸು ಸಿಗುತ್ತದೆ. ತಾನೂ, ತನ್ನ ಕುಟುಂಬವೂ ಗಂಜಿಕಾಯಿಸಿಕೊಂಡು ಕುಡಿಯಬಹುದು."

ಹೀಗೆಂದು ಆಲೋಚಿಸಿ ಬಲಭದ್ರನು ಕೊಡಲಿಯಿಂದ ವಿಗ್ರಹದ ತಲೆಯನ್ನು ಸೀಳಲು

ಎಂ. ಕಲ್ಯಾಣಿ



ಸಿದ್ಧನಾದನು. ಅಷ್ಟರಲ್ಲಿ ವಿಗ್ರಹದಿಂದ: "ನಿಲ್ಲಿಸು.....ನಿಲ್ಲಿಸು. ನನ್ನ ತಲೆಯೊಡೆಯುವೆಯಾ? ದುರುಳಾ, ನಾನು ಯಾರೆಂದು ತಿಳಿದಿರುವೆ?" ಎಂಬ ಮಾತುಗಳು ಹೊರಬಿದ್ದುವು.

ಬಲಭದ್ರನು ತಕ್ಷಣ ಕೊಡಲಿಯನ್ನು ಕೆಳಗಿಳಿಸಿ ವಿಗ್ರಹಕ್ಕೆ ನಮಸ್ಕಾರಮಾಡಿ, "ತಾಯೇ ನನ್ನನ್ನು ಕ್ಷಮಿಸು. ಇದರಲ್ಲಿ ನೀನಿರುವೆಯೆಂದು ನಾನು ನಂಬಿರಲಿಲ್ಲ. ಪೂಜೆಪುನಸ್ಕಾರಗಳಿಲ್ಲದ ಮರದ ಬೊಂಬೆಯೆಂದು ಭಾವಿಸಿದ್ದೆ. ಸೌದೆ ತೆಗೆದುಕೊಂಡು ಹೋಗಲು ಅಡವಿಗೆ ಬಂದರೆ ನನ್ನ ದುರದೃಷ್ಟಕ್ಕೆ ಮಳೆ ಬಂದು ಎಲ್ಲವೂ ಒದ್ದೆಯಾಗಿದೆ. ಏನೋ ಈ ವಿಗ್ರಹವಾದರೂ ಸಿಕ್ಕಿತಲ್ಲಾ ಎಂದು ಸಮಾಧಾನ ತಂದುಕೊಂಡಿದ್ದೆ. ಆದರೆ ಇದರಲ್ಲಿ ನೀನಿರುವೆ. ಅಂತೂ ಇಂತೂ ಕುಂತಿ ಮಕ್ಕಳಿಗೆ ರಾಜ್ಯವಿಲ್ಲವೆಂದಹಾಗೆ ನಮಗೂ ನಮ್ಮ ಮಕ್ಕಳಿಗೂ ಗಂಜಿಯಿಲ್ಲ ಇಂದು" ಎಂದು ದೈನ್ಯದಿಂದ ನುಡಿದ.

"ನಿನ್ನ ಬಡತನದ ವಿಷಯ ನನಗೆ ತಿಳಿದಿದೆ. ನನಗೆ ನಿನ್ನಮೇಲೇನೂ ಕೋಪವಿಲ್ಲ. ಬಡತನವೆನ್ನುವುದು ಮಾನವನಿಂದ ಇದಕ್ಕಿಂತಲೂ ಹೆಚ್ಚು ಅನಾಹುತಗಳನ್ನು ಮಾಡಿಸುತ್ತದೆ. ನೀನು ಸುಖವಾಗಿ ಜೀವನಮಾಡಿಕೊಂಡಿರಲು ಒಂದು ಉಪಾಯ ಹೇಳುವೆನು. ನೀನು ಮನೆಗೆ ಹೋಗಿ ಹೊಸ ಮಡಕೆಯನ್ನು ತಂದು, ನನ್ನನ್ನು ಧ್ಯಾನಿಸಿ ಅದನ್ನು ಒಲೆಯಮೇಲಿಡು. ಕೊಡಲೇ ಅದರಲ್ಲಿ ನಿಮ್ಮ ಕುಟುಂಬಕ್ಕೆ ಅಗತ್ಯವಾದ ಆಹಾರವಿರುತ್ತದೆ. ತಿಂಡಿಗೆ ಕೊರತೆಯಿಲ್ಲದೆ ನಿಮ್ಮ ಕುಟುಂಬವೆಲ್ಲಾ ಸುಖವಾಗಿರಿ" ಎಂದಿತು ವಿಗ್ರಹ. ಬಲಭದ್ರನು ತನ್ನ ಕೊಡಲಿಯನ್ನು ದೂರ ಎಸೆದು, ವಿಗ್ರಹದ ಕಾಲಿಗೆ ಸಾಷ್ಟಾಂಗ ನಮಸ್ಕಾರಮಾಡಿ, ಜೋ ಎಂದು ಸುರಿಯುತ್ತಿದ್ದ ಮಳೆಯನ್ನೂ ಗಮನಿಸದೆ ಮನೆಗೆ ಹಿಂತಿರುಗಿದನು.

ತನ್ನ ಗಂಡನು ಬರಿಗೈಯಲ್ಲಿ ಮನೆಗೆ ಹಿಂತಿರುಗಿ ಬಂದುದನ್ನು ಕಂಡು ಬಲಭದ್ರನ ಹೆಂಡತಿ ಅಚ್ಚರಿಯಿಂದ "ಸೌದೆ ತರಲಿಲ್ಲವೇ? ಕೊಡಲಿಯೇನಾಯಿತು? ಇಂದು ನಮಗೆಲ್ಲಾ ಉಪವಾಸ, ಅಷ್ಟೇತಾನೇ" ಎಂದು ಕಾತುರಳಾಗಿ ಕೇಳಿದಳು. "ಇನ್ನುಮುಂದೆ ನಮಗೆ ಸೌದೆ ಮತ್ತು ಕೊಡಲಿಗಳಿಂದ ಕೆಲಸವಿಲ್ಲ. ಅಮ್ಮನವರ ಅನುಗ್ರಹ ಪಡೆದಿದ್ದೇನೆ" ಎಂದು ಬಲಭದ್ರನು





ಬಲಭದ್ರನ ಮನೆಯ ಪಕ್ಕದಲ್ಲಿ ಮತ್ತೊಂದು ಮನೆಯಿತ್ತು. ಆ ಮನೆಯಾಕೆಯ ಹೆಸರು ಮಂಡೋದರಿ. ಗಂಜಿಹೊರತು ಬೇರೊಂದನ್ನು ಕಾಣದ ಬಲಭದ್ರನ ಕುಟುಂಬ ದಿನಾ ಪಂಚ ಭಕ್ಷಪರಮಾನ್ನಗಳನ್ನು ತಿನ್ನುತ್ತಿರುವುದನ್ನು ಕಂಡು ಮಂಡೋದರಿಗೆ ಅಸೂಯೆ ಜನಿಸಿತು. 'ಎಲಯೆಲಾ, ಅಲ್ಪಸ್ವಲ್ಪ ಆಸ್ತಿಯಿದ್ದ ನಮಗೇ ಸಾಧ್ಯವಿಲ್ಲದಿರುವಾಗ ಹುಟ್ಟುದರಿದ್ರರು ದಿನಾ ಮೃಷ್ಟಾನ್ನ ಭೋಜನಮಾಡುತ್ತಿರುವುದಾದರೂ ಹೇಗೆ? ದಿನಾ ಹತ್ತು ಜನಕ್ಕೆ ಊಟವಿಡುತ್ತಿದ್ದಾರೆ. ಇವರಿಗೆ ಇಷ್ಟೊಂದು ಸಂಪತ್ತು ಹೇಗೆ ಲಭಿಸಿತು?" ಎಂದು ಒಂದೇಸವನೆ ಯೋಚಿಸುತ್ತಿದ್ದಳು.

ಹೆಂಡತಿಗೆ ಅಡವಿಯಲ್ಲಿ ನಡೆದ ಅತಿಶಯವನ್ನೆಲ್ಲಾ ವಿವರಿಸಿ ಹೇಳಿದನು.

ಬಲಭದ್ರನ ಹೆಂಡತಿ ಒಂದು ಹೊಸ ಮಡಕೆಯನ್ನು ತಂದು ಅದರಮೇಲೆ ಮುಚ್ಚಳವಿಟ್ಟು, ಒಲೆಯಮೇಲಿಟ್ಟು ಕೆಳಗಿಳಿಸಿದಳು. ಮುಚ್ಚಳ ತೆಗೆದು ನೋಡಿದರೆ ಅದರಲ್ಲಿ ಬಗೆಬಗೆಯ ತಿಂಡಿಗಳು ಇದ್ದುವು. ಆ ಗಂಡ ಹೆಂಡತಿ ಮಕ್ಕಳು ಮರಿಗಳು ತಮ್ಮ ಜನ್ಮದಲ್ಲಿ ಮೊತ್ತಮೊದಲನೇ ಸಾರಿ ಹೊಟ್ಟೆತುಂಬಾ ಉಂಡು ಸುಖವಾಗಿ ನಿದ್ರೆಹೋದರು. ಅಂದಿನಿಂದ ಬಲಭದ್ರನ ಕುಟುಂಬಕ್ಕೆ ತಿಂಡಿ ತೀರ್ಥಗಳಿಗೆ ಕೊರತೆಯಿಲ್ಲ. ಅವರು ಹೊತ್ತು ಹೊತ್ತಿಗೆ ಮೃಷ್ಟಾನ್ನ ಭೋಜನ ಮಾಡುತ್ತಿದ್ದರು. ನೆರೆಹೊರೆಯವರನ್ನು ಕರೆದು ಅವರಿಗೂ ಊಟವಿಡುತ್ತಿದ್ದರು.

ಒಂದು ದಿನ ಆಕೆ ಬಲಭದ್ರನ ಕಿರಿಯ ಮಗನನ್ನು ಕರೆದು "ಮಗೂ, ನಿಮ್ಮಪ್ಪ ಅಡವಿಗೆ ಹೋಗಿ ಸೌದೆ ಏಕೆ ತರುತ್ತಿಲ್ಲ? ಈ ಪದಾರ್ಥಗಳನ್ನೆಲ್ಲಾ ಎಲ್ಲಿಂದ ತರುತ್ತಿರುವರು? ದಿನಾ ನಿಮ್ಮ ತಾಯಿ ಅಷ್ಟೊಂದು ಜನಕ್ಕೆ ಅಡಿಗೆಮಾಡಿ ಹಾಕುವರಲ್ಲಾ ಹೇಗೆ ಸಾಧ್ಯ?" ಎಂದು ಕೇಳಿದಳು.

ಬಲಭದ್ರನ ಮಗ ಮಂಡೋದರಿಯೊಂದಿಗೆ ನಿಜ ಹೇಳಿಬಿಟ್ಟನು. "ಅಡವಿಯಲ್ಲಿ ದೇವತೆಯೊಬ್ಬಳ ಅನುಗ್ರಹದಿಂದ ನಮಗೊಂದು ಮಡಕೆ ಸಿಕ್ಕಿತು. ಆ ಮಡಕೆಯಲ್ಲಿ ನಾವು ಕೋರಿದ ಪದಾರ್ಥ ಸಿಗುತ್ತದೆ. ನನ್ನ ತಾಯಿ ಅಡಿಗೆಮಾಡುವುದಿಲ್ಲ. ನಮ್ಮ ತಂದೆ ಸರಕು ಸಾಂಬಾರಗಳನ್ನು ತರುವುದಿಲ್ಲ" ಎಂದು ಅಡವಿ





యల్లి నడెద ఘటనెయన్ను తిళిసిదను. ఇదన్ను కేళి మండోదరియ హొట్టె ఉరియితు. అవళు తలెగె బట్టె కట్టికొండు ఒందు మూలెయల్లి బిద్దుకొండళు. అందు అడిగె మాడలిల్ల. "అమ్మా అన్న ఇడే" ఎందు మక్కళు హత్తిర బరలు అవరన్ను గదరికొండళు. భోజనద వేళెగె మండో దరియ గండ మనెగె బందు ఒలె హొత్తిస దిరువుదన్ను కండు విస్మయహొంది "లే, ఏనాయితే?" ఎందు కేళిదను.

"ఏను నడెయితే? ఊరల్లి నిర్గతికరు దేవతెయ అనుగ్రహ పడెదు ఒలె ఉరిసదె పంచభక్ష్యపరమాన్నగళన్ను ముక్కుత్తిద్దరె నాను ఇడీ దిన మైమురిదు చాకరి మాడ బేకాగిదె" ఎందు గొణగిదళు.

గండను అవళింద విషయవెల్లవన్నూ తిళిదుకొండు "హాగాదరె నానేను మాడ బేకో హేళు" ఎందను

"కణికేళువిరా? కొడలి తెగెదుకొండు హోగి తలెయొడెయువెనెందు అడవి యల్లిరువ దేవతెయన్ను హెదరిసి వరపడెదు బన్ని. నానంతూ ఇన్నుమేలె అడిగెమాడువు దిల్ల" ఎందళు మండోదరి.

"ఏను మాతదు? దేవతెయ తలెయొడె యువుదుంటే?" ఎంద గండ నిబ్బెరగాగి.

"నిమగె స్వల్పవాదరూ బుద్ధియిల్ల. పూజిసిదరె వర కొడద దేవతె మునిదరె



వర నీడువళు హోగిబేగ" ఎందళు.

తన్న హెండతియ మాతినంతె కేళదిద్దరె మనెయల్లి శాంతి ఇరువుదిల్లవెందరితు మండోదరియ గండ కొడలియన్ను భుజద మేలిట్టుకొండు అడవిగె హోదను. కొంచహొత్తు అడవియల్లి అత్తిత్త హుడు కిదనంతర అవనిగె చావడి సిక్కితు. అల్లి అమ్మనవర విగ్రహ కాణిసితు. మండో దరియ గండ ఆ విగ్రహవన్ను సమీపిసి కొడలియన్ను మేలెత్తిదను.

మరుక్షణవే భూమి అదురితు. విగ్రహ దింద అపూర్వ కాంతియొందు హొరటు అవన కణ్ణుగళు కురుడాదువు. యారో అవనన్ను ఒద్దంతాయితు. అవను కెళగె

ಬಿದ್ದುಬಿಟ್ಟನು. ಆಗ ಅವನಿಗೆ ಒಂದು ಕರ್ಕಶವಾದ ಧ್ವನಿ ಕೇಳಿಸಿತು: "ನೀಚನೇ, ನನ್ನನ್ನೇ ಹೊಡೆಯಲು ಬಂದೆಯಾ? ನಿನಗೆಷ್ಟು ಸೊಕ್ಕು? ನಾನು ಯಾರೆಂದು ತಿಳಿದಿರುವೆ?"

ಮಂಡೋದರಿಯ ಗಂಡ ನಡುಗಿದನು. ಅವನ ಶರೀರವೆಲ್ಲಾ ಚುರಚುರನೆ ಉರಿಯಲಾರಂಭಿಸಿತು.

"ಕ್ಷಮಿಸು ತಾಯೇ. ತಿಳಿಯದೆ ಅಪರಾಧವೆಸಗಿದೆ. ಇದೇ ಕೆಲಸ ಮಾಡಹೋಗಲು ಬಲಭದ್ರನಿಗೆ ಅನುಗ್ರಹನೀಡಿದೆ. ನನ್ನಮೇಲೇಕೆ ಆಗ್ರಹಗೊಂಡಿರುವೆಯೋ ತಿಳಿಯದಾಗಿದೆ" ಎಂದು ದೀನನಾಗಿ ಆತ ಕೇಳಿದ.

"ಬಲಭದ್ರನು ಹುಟ್ಟುದರಿದ್ರ. ನೀನೇನೂ ದರಿದ್ರನಲ್ಲವಷ್ಟೆ. ನಿನ್ನನ್ನೇಕೆ ಕ್ಷಮಿಸಬೇಕು?" ಎಂದಿತು ವಿಗ್ರಹ.

"ಅವನು ದರಿದ್ರನಾಗಿದ್ದರೆ ನಾನು ಅಜ್ಞಾನಿ. ಕೃಪೆದೋರು ತಾಯಿ" ಎಂದು ಮಂಡೋದರಿಯ ಗಂಡ ವಿಗ್ರಹದಮುಂದೆ ಮೊಣಕಾಲೂರಿ ಗಳಗಳನೆ ಅತ್ತುಬಿಟ್ಟನು. "ಹಾಗಾದರೆ ಕೇಳು. ಒಂದು ಷರತ್ತಿನಮೇಲೆ ನಿನ್ನನ್ನು ಈಸಾರಿ ಕ್ಷಮಿಸುವೆನು. ನಾನು ಬಲಭದ್ರನಿಗೆ ಕೊಟ್ಟ ಪಾತ್ರೆಯಲ್ಲಿ ಪ್ರತಿಯೊಂದೂ ಸಿಗುವಂತೆ ಅನುಗ್ರಹಿಸಿದೆನಾದರೂ ತುಪ್ಪವನ್ನು ಕೊಡುವುದನ್ನು ಮಾತ್ರ ಮರೆತುಹೋದೆ. ಪಾಪ, ಅವರು ತುಪ್ಪವಿಲ್ಲದೆ ಊಟಮಾಡುತ್ತಿದ್ದಾರೆ. ಆದುದರಿಂದ ನೀನು ಮನೆಗೆ ಹೋಗಿ ಪ್ರತಿದಿನ ಅವರಿಗೆ ಒಂದು ಸೇರು ತುಪ್ಪವನ್ನು ಕೊಡಬೇಕು. ಆ ರೀತಿ ಮಾಡಲು ಒಪ್ಪಿದರೆ ನಿನ್ನನ್ನು ಕ್ಷಮಿಸುವೆನು" ಎಂದಳು ದೇವತೆ.

"ನಿನ್ನಿಷ್ಟದಂತೆಯೇ ಆಗಲಿ, ಮಹಾತಾಯಿ. ನೀನು ಹೇಳಿದಂತೆ ಮಾಡುವೆನು. ನನ್ನ ತಪ್ಪನ್ನು ಕ್ಷಮಿಸು" ಎಂದನು ಮಂಡೋದರಿಯ ಗಂಡ. ಕೂಡಲೇ ಅವನ ಕುರುಡುತನ, ಶರೀರಬಾಧೆಗಳೆಲ್ಲವೂ ನಿವಾರಣೆಯಾದುವು. ಅವನು ಮನೆಗೆ ಹೋಗಿ ಹೆಂಡತಿಯೊಂದಿಗೆ ನಡೆದುದನ್ನೆಲ್ಲಾ ತಿಳಿಸಿ "ಸ್ತ್ರೀಬುದ್ಧಿ ಪ್ರಳಯಾಂತಕವೆಂದು ಹಿರಿಯರು ಸುಮ್ಮನೆ ಹೇಳಿದರೇ? ಇನ್ನುಮೇಲೆ ದಿನಾ ಒಂದು ಸೇರು ತುಪ್ಪ ಬಲಭದ್ರನ ಮನೆಗೆ ಮುಟ್ಟಿಸಬೇಕು" ಎಂದನು. ಗತ್ಯಂತರವಿಲ್ಲದೆ ಅದೇ ರೀತಿ ಮಾಡುತ್ತಿದ್ದಳು ಮಂಡೋದರಿ.






## 7

[ಟ್ರಾಯ್‌ನಗರವನ್ನು ಗ್ರೀಕರು ಮುತ್ತಿದ ಒಂಬತ್ತು ವರ್ಷಗಳಿಗೆ ಗ್ರೀಕ್ ಶಿಬಿರದಲ್ಲಿ ಅಂತಃಕಲಹಗಳೇರ್ಪಟ್ಟು, ಗ್ರೀಕ್‌ವೀರರಲ್ಲಿ ಅಗ್ರಗಣ್ಯನಾದ ವಜ್ರಕಾಯನು ಯುದ್ಧರಂಗದಿಂದ ಹೊರಬಿದ್ದನು. ಟ್ರೋಜನರು ಒಂದು ಗ್ರೀಕ್ ನೌಕೆಗೆ ಬೆಂಕಿ ಹಚ್ಚಿದರು. ಇದನ್ನು ಕಂಡು ವಜ್ರಕಾಯನು ಮತ್ತೆ ಯುದ್ಧರಂಗಕ್ಕೆ ಬಂದನು. ಟ್ರೋಜನರಲ್ಲಿ ಸಾಹಸವಂತನಾದ ವೀರಸಿಂಹನು ವಜ್ರಕಾಯನಿಂದ ಹತನಾದನು. ಭುವನಸುಂದರಿಯನ್ನು ಹಾರಿಸಿಕೊಂಡುಬಂದ ಮೋಹನನು ಸೂರ್ಯಾಲಯದಲ್ಲಿ ವಜ್ರಕಾಯನನ್ನು ಕೊಂದನು.]

ವಜ್ರಕಾಯನ ಮರಣಾನಂತರ ಗ್ರೀಕರ ಪದ್ಧತಿಯ ಪ್ರಕಾರ ಅನೇಕ ವೀರಪ್ರದರ್ಶಕವಾದ ಸ್ಪರ್ಧೆಗಳು ನಡೆದುವು. ಓಡುವ ಪಂದ್ಯದಲ್ಲಿ ದೇವಮಯನೂ, ಚಕ್ರವೆಸೆಯುವ ಪಂದ್ಯದಲ್ಲಿ ಭೂಧವನೂ ಗೆದ್ದರು. ಇನ್ನೂ ಅನೇಕರು ಸ್ಪರ್ಧಿಸಿ ಜಯಶಾಲಿಗಳಾದರು.

ವಜ್ರಕಾಯನ ತಾಯಿ ತಟನಿ ತನ್ನ ಮಗನ ಅಸ್ತ್ರಶಸ್ತ್ರಗಳನ್ನು ಗ್ರೀಕ್ ವೀರರಲ್ಲಿ ಅಗ್ರಗಣ್ಯನಾದ ಯೋಧನಿಗೆ ಕೊಡುವುದಾಗಿ ಹೇಳಿದಳು. ವಜ್ರಕಾಯನ ಶವವನ್ನು ರಕ್ಷಿಸಿ ತಂದ ರೂಪಧರ, ಭೂಧವರು ಮಾತ್ರ ಆ ಆಯುಧಗಳಿಗೆ ತಾವು ಅರ್ಹರೆಂದು ಹೇಳಿದರು. ಹಾಗೆ ಹೇಳಲು ಮತ್ತೆ ಯಾರಿಗೂ ತಮ್ಮ ವೀರಪ್ರತಾಪಗಳಲ್ಲಿ ನಂಬುಗೆಯೂ ಧೈರ್ಯವೂ ಇರಲಿಲ್ಲ.

ರಾರಾಜನು ಅವರಿಬ್ಬರಲ್ಲಿ ಮಹಾವೀರನು ಯಾರೋ ತೀರ್ಮಾನಿಸಲಾರದೆ ವಯೋ

ಒಂದು ಗ್ರೀಕ್ ಪುರಾಣಕಥೆಯ ಆಧಾರದಿಂದ

ವೃದ್ಧನೂ, ಜ್ಞಾನವೃದ್ಧನೂ ಆದ ನವದ್ಯೋತ ನನ್ನು ನೋಡಿ ಸಲಹೆ ಕೇಳಿದನು.

"ನಮ್ಮವರ ಪರಾಕ್ರಮವನ್ನು ನಾವೇ ನಿರ್ಣಯಿಸುವುದಕ್ಕಿಂತಲೂ ಶತ್ರುಗಳು ಚೆನ್ನಾಗಿ ನಿರ್ಣಯಿಸಬಲ್ಲರು. ನಮ್ಮ ವೀರರನ್ನು ಕುರಿತು ಅವರಾಡಿಕೊಳ್ಳುವುದನ್ನು ತಿಳಿದು ಬರಲು ಬೇಹುಗಾರರನ್ನು ಈ ರಾತ್ರಿ ಕೋಟೆಯ ಗೋಡೆಯ ಬಳಿಗೆ ಕಳುಹಿಸು" ಎಂದು ನವದ್ಯೋತನು ರಾರಾಜನಿಗೆ ಸಲಹೆ ಕೊಟ್ಟನು.

ಗ್ರೀಕ್ ಬೇಹುಗಾರರು ಅಂತೆಯೇ ಕತ್ತಲೆಯಲ್ಲಿ ಟ್ರಾಯ್ ಕೋಟೆಯ ಗೋಡೆ ಮಗ್ಗಲಲ್ಲಿ ನಿಂತು ಗೋಡೆಯಾಚೆ ಕೆಲವು ಯುವತಿಯರು ಹರಟೆ ಕೊಚ್ಚುತ್ತಿರುವುದನ್ನು ಗುಟ್ಟಾಗಿ ಆಲಿಸಲಾರಂಭಿಸಿದರು.

ಅವರ ಅದೃಷ್ಟಕ್ಕೆ ಸರಿಯಾಗಿ ವಜ್ರಕಾಯನ ಶರೀರವನ್ನು ಗ್ರೀಕರು ಎತ್ತಿಕೊಂಡು ಹೋದ ವಿಷಯವನ್ನು ಅವರು ಚರ್ಚಿಸುತ್ತಿದ್ದರು. ಅವರ ಸಂಭಾಷಣೆ ಗ್ರೀಕ್ ಗೂಢಚಾರರಿಗೆ ಕೇಳಿಸುತಿತ್ತು.

"ನಮ್ಮ ವೀರರು ಬಾಣಗಳ ಸುರಿಮಳೆಗರೆಯುತ್ತಿದ್ದರೂ ಲಕ್ಷ್ಯಮಾಡದೆ ವಜ್ರಕಾಯನ ಶರೀರವನ್ನು ಭುಜದಮೇಲೆ ಹೊತ್ತುಕೊಂಡು ಹೋದ ಭೂಧವನ ಪರಾಕ್ರಮ ಹೇಳತೀರದು" ಎಂದಳೊಬ್ಬ ಟ್ರೊಜನ್ ಯುವತಿ.

ಕೂಡಲೇ ಮತ್ತೊಬ್ಬಳು "ಭುಜದಮೇಲೆ ಶವವನ್ನು ಹೊತ್ತುಕೊಂಡು ಹೋಗುವುದು ಕಠಿನಕಾರ್ಯವಲ್ಲ. ಯಾವ ಗುಲಾಮನಾದರೂ ಮಾಡಬಲ್ಲ. ತನ್ನನ್ನೂ ಭೂಧವನನ್ನೂ ರಕ್ಷಿ



ಸುತ್ತಾ ಅಷ್ಟು ಜನರೊಂದಿಗೆ ಹೋರಾಡಿದ ರೂಪಧರನ ಶೌರ್ಯ ವರ್ಣನಾತೀತ" ಎಂದಳು ಮತ್ತೊಬ್ಬ ತರುಣಿ.

ಉಳಿದವರು ಆಕೆಯ ಮಾತನ್ನು ಅನುಮೋದಿಸಿದರು. ಹೊಂಚಿ ಕೇಳುತ್ತಿದ್ದ ಬೇಹುಗಾರರು, ತಮ್ಮ ಕಾರ್ಯವಾಯಿತೆಂದುಕೊಂಡು ಇಲ್ಲಿಂದ ಹೊರಟರು. ಈ ವಿಷಯವನ್ನು ರಾರಾಜನಿಗೆ ತಿಳಿಸಿದರು. ರಾರಾಜನು ವಜ್ರಕಾಯನ ಅಸ್ತ್ರಶಸ್ತ್ರಗಳನ್ನು ರೂಪಧರನಿಗೆ ಕೊಡಿಸಿಕೊಟ್ಟನು.

ಇದರಿಂದ ಭೂಧವನಿಗೆ ಅಪಮಾನವಾದಂತಾಯಿತು. ವಜ್ರಕಾಯನು ಬದುಕಿದ್ದರೆ ತನ್ನ ದಾಯಾದಿಯಾದ ಭೂಧವನಿಗೆ ಹೀಗೆ ಅವಮಾನವಾದುದನ್ನು ಕಂಡು ಸಹಿಸುತ್ತಿರಲಿಲ್ಲ. ರಾರಾಜ ಪ್ರತಾಪರನ್ನು ಕೂಡಲೇ ತರಾಟೆಗೆ ತೆಗೆದು ಕೊಳ್ಳುತ್ತಿದ್ದನು. ಈಗ ಆತನಿಲ್ಲದ ಪ್ರಯುಕ್ತ ರಾರಾಜನು ರೂಪಧರನೇ ಭೂಧವನಿಗಿಂತಲೂ ಅಪ್ರತಿಮ ಸಾಹಸಿಯೆಂದು ನಿರ್ಣಯಿಸಿದನು.

ಕೋಪಾವೇಶದಲ್ಲಿ ಭೂಧವನಿಗೆ ಮತಿಕೆಟ್ಟಿತು. ಗ್ರೀಕರು ಟ್ರಾಯ್‌ಪಟ್ಟಣದ ಗಡಿ ಪ್ರಾಂತ್ಯದಿಂದ ಕೊಳ್ಳೆಹೊಡೆದು ತಂದಿದ್ದ ಪಶುಗಳನ್ನೆಲ್ಲಾ ಒಂದೆಡೆ ಕೂಡಿಹಾಕಿದ್ದರು. ಭೂಧವನು ಉನ್ಮಾದದಲ್ಲಿ ಗೋವುಗಳಮಧ್ಯೆ ನುಗ್ಗಿ ಅವುಗಳಿಗೆ ಚಿತ್ರಹಿಂಸೆ ಕೊಟ್ಟನು. ಎರಡು ಬಿಳಿ ಕಾಲಿನ ಕುರಿಗಳನ್ನು ಕಂಡು ಒಂದನ್ನು ರಾರಾಜ ಪ್ರತಾಪರಲ್ಲೊಬ್ಬನೆಂದು ಭಾವಿಸಿ ಅದರ ತಲೆ ಕಡಿದುಹಾಕಿದನು. ಇನ್ನೊಂದು ಕುರಿಯ ಕಾಲುಗಳನ್ನು ಕಟ್ಟಿಹಾಕಿ ರೂಪಧರನೆಂದು





ಭಾವಿಸಿ ಚಾವಟಿಯಿಂದ ಪಟಪಟನೆಂದು ಹೊಡೆದನು. ಕೊಂಚಹೊತ್ತಿಗೆ ಅವನ ಉನ್ಮತ್ತತೆ ಶಾಂತಿಹೊಂದಿತು. ಅನಂತರ ಬೇರೇನು ಮಾಡಲೂ ತೋರದೆ ನೆಟ್ಟಗೆ ಸಮುದ್ರತೀರಕ್ಕೆ ಹೋಗಿ ಅಲ್ಲಿ ತನ್ನ ಖಡ್ಗದಿಂದ ತನ್ನನ್ನುತಾನೇ ಇರಿದುಕೊಂಡು ಪ್ರಾಣತೊರೆದನು.

ಅವನ ಶವಕ್ಕೆ ಧೀರರಿಗೆ ಉಚಿತವಾದ ದಹನ ಸಂಸ್ಕಾರವಾಚರಿಸಲು ಸಾಧ್ಯವಿಲ್ಲವೆಂದೂ, ಎಲ್ಲಿಯೋ ಒಂದುಕಡೆ ಹೂತುಬಿಡಬೇಕೆಂದೂ ಪ್ರತಾಪನು ಹೇಳಿದನು.

ಆದರೆ ರೂಪಧರನು ಆ ಅಭಿಪ್ರಾಯಕ್ಕೆ ಅಡ್ಡಬಂದನು. ಭೂಧವನಿಗೆ ವೀರರಿಗೆ ಉಚಿತವಾದ ದಹನಸಂಸ್ಕಾರ ನಡೆಯುವಂತೆ ಪ್ರತಾಪನನ್ನು ಒಪ್ಪಿಸಿ ಏರ್ಪಾಟುಮಾಡಿದನು.



ವಜ್ರಕಾಯನ ಮರಣದಿಂದ ಗ್ರೀಕರಲ್ಲಿ ನಿರುತ್ಸಾಹ ತೋರಿಬಂತು. ಆಗ ದಿವ್ಯದೃಷ್ಟಿಯ ಮಹಿಮೆಯನ್ನು ಪಡೆದ ಕಾಂಶುಕನು ಗ್ರೀಕರ ಭವಿಷ್ಯವನ್ನು ಕುರಿತು ಹೇಳಿದನು : 'ಲೆಮ್ನಾಸ್ ದ್ವೀಪವನ್ನು ಪಾಲಿಸುವ ಧನಧವನಬಳಿ ದೇವತೆಗಳಿಂದ ಪಡೆದ ವಿಶೇಷಶಕ್ತಿ ತುಂಬಿರುವ ಬಿಲ್ಲುಬಾಣಗಳಿವೆ. ಅದರಿಂದಹೊರತು ಗ್ರೀಕರು ಟ್ರಾಯ್ ನಗರವನ್ನು ವಶಪಡಿಸಿಕೊಳ್ಳುವುದು ಖಂಡಿತವಾಗಿ ಅಸಂಭವ.'

ಈ ಕಾರ್ಯ ಮಾಡಲು ರಾರಾಜನು ರೂಪಧರ, ದೇವಮಯರನ್ನು ಕಳುಹಿಸಿದನು. ಲೆಮ್ನಾಸ್ ದ್ವೀಪ ಗ್ರೀಕರು ಬಿಡಾರಹಾಕಿದ್ದ ಶಿಬಿರಕ್ಕೆ ಸುಮಾರು ನಲವತ್ತು ಮೈಲು ದೂರದಲ್ಲಿತ್ತು. ಗ್ರೀಕ್‌ವೀರರು ಲೆಮ್ನಾಸ್ ದ್ವೀಪಕ್ಕೆ ಬಂದಾಗ ಧನಧವನು ರಾಜಕುರುವಿನಿಂದ ಅವಸ್ಥೆಪಡುತ್ತಿದ್ದನು.

ರೂಪಧರನು ಸವಿಮಾತುಗಳಿಂದ ಧನಧವನ ಬಳಿಯಿಂದ ಧನುರ್ಬಾಣಗಳನ್ನು ಪಡೆಯಲು ಪ್ರಯತ್ನಿಸಿದನು. ಆದರೆ ಧನಧವನು ಅವನ ಸವಿಮಾತಿಗೆ ಮರುಳಾಗಲಿಲ್ಲ. ಆ ಸಮಯದಲ್ಲಿ ಧನಧವನಿಗೆ ದೇವತೆಗಳು ಕಾಣಿಸಿಕೊಂಡು "ನೀನು ಸ್ವತಃ ಟ್ರಾಯ್ ನಗರಕ್ಕೆ ಹೋಗು. ಯುದ್ಧದಲ್ಲಿ ನಿನಗೆ ಅಪಾರ ಕೀರ್ತಿ ಮತ್ತು ಲಾಭ ಲಭಿಸುವುದು. ವಜ್ರಕಾಯನ ಮಗನಾದ ನವಯೋಧ ಮತ್ತು ನೀನೂ ಟ್ರಾಯ್ ನಗರದ ಪತನಕ್ಕೆ ಕಾರಣರಾಗುವಿರಿ. ನಿಮ್ಮಿಬ್ಬರಲ್ಲಿ ಯಾರೊಬ್ಬರು ಇಲ್ಲದಿದ್ದರೂ ಆ ಮಹಾನಗರ





ಪತನವಾಗಲಾರದು" ಎಂದು ಹೇಳಿದರು. ಅದೇಪ್ರಕಾರ ಧನಧವನು ತನ್ನಬಳಿಯಿದ್ದ ದಿವ್ಯಾಸ್ತ್ರಗಳೊಂದಿಗೆ ಹೊರಟು ಗ್ರೀಕ್ ವೀರರೊಂದಿಗೆ ಯುದ್ಧರಂಗಕ್ಕೆ ಬಂದನು. ಗ್ರೀಕ್ ಶಿಬಿರದಲ್ಲಿ ನಿಪುಣರಾದ ಶಸ್ತ್ರವೈದ್ಯರಿದ್ದರು. ಅವರು ಧನದವನಿಗೆ ಸ್ನಾನಮಾಡಿಸಿ, ನಿದ್ದೆ ಬರಲು ಮದ್ದು ಕೊಟ್ಟು, ಅವನ ಕುರುವಿಗೆ ಶಸ್ತ್ರಚಿಕಿತ್ಸೆ ಮಾಡಿ, ಗಾಯಕ್ಕೆ ಔಷಧಿಹಾಕಿ, ನಾಗಮಣಿ ಶಿಲೆಯನ್ನು ಕಟ್ಟಿದರು.

ಬೇಗನೆ ಧನಧವನ ಹುಣ್ಣು ವಾಸಿ ಆಯಿತು. ಆತನು ಗುಣಹೊಂದಿದ ದಿನವೇ ಯುದ್ಧರಂಗಕ್ಕೆ ಹೋದನು. ಮೋಹನನನ್ನು ಯುದ್ಧಕ್ಕೆ ಆಹ್ವಾನಿಸಿದನು. ಆ ಯುದ್ಧದಲ್ಲಿ ಧನಧವನು ಬಿಟ್ಟ ಮೊದಲನೇ ಬಾಣ ಮೋಹನನಿಗೆ ತಾಕಲಿಲ್ಲ. ಎರಡನೇ ಬಾಣ ಮೋಹನನ ಎಡಗೈಗೆ ತಾಕಿತು. ಮೂರನೇ ಬಾಣಕ್ಕೆ ಮೋಹನನ ಬಲಗಣ್ಣು ಹಾರಿತು. ನಾಲ್ಕನೇ ಬಾಣದಿಂದ ಧನಧವನು ಮೋಹನನ ಹಿಮ್ಮಡಿಗೆ ಬಲವಾಗಿ ಹೊಡೆದನು.

ಮೋಹನನು ಅಸಹಾಯಕ ಸ್ಥಿತಿಯಲ್ಲಿರುವುದನ್ನು ಕಂಡು ಪ್ರತಾಪನು ಅವನನ್ನು ಯಮಪುರಿಗೆ ಕಳುಹಿಸಲು ಹವಣಿಸಿದನು. ಆದರೆ ಮೋಹನನು ಕುಂಟುತ್ತಾ ಪ್ರತಾಪನ ಕೈಗೆ ಸಿಕ್ಕದೆ ಕೋಟೆಯೊಳಕ್ಕೆ ಸೇರಿಕೊಂಡನು. ಮೋಹನನಿಗೆ ಚಿಕಿತ್ಸೆಮಾಡಲು ಐಡಾಪರ್ವತದಿಂದ ಮೂಲಿಕೆಗಳನ್ನು ತರಿಸಿದರು. ಆದರೆ ಆ ಮೂಲಿಕೆಗಳು ಬರುವಷ್ಟರಲ್ಲಿ ಮೋಹನನ ಪ್ರಾಣ ಹಾರಿಹೋಗಿತ್ತು.

ಮೋಹನನು ಮರಣಿಸಿದಕೂಡಲೇ ಭುವನಸುಂದರಿಯನ್ನು ಪಡೆಯಲು ಅವನ ಸಹೋದರರಾದ ಚಂದ್ರ ಮತ್ತು ಅರಿಭಯಂಕರರಲ್ಲಿ ಕಾದಾಟವಾಯಿತು. ಯುದ್ಧದಲ್ಲಿ ಅರಿಭಯಂಕರನು ಹೆಚ್ಚು ಪರಾಕ್ರಮ ತೋರಿದನೆಂದು ವರ್ಧನನು ಅವನಪರವಾಗಿ ತೀರ್ಪುಕೊಟ್ಟನು. ಆದರೆ ಭುವನಸುಂದರಿಮಾತ್ರ ತಾನು ಸ್ಪಾರ್ಟಾದೇಶದ ರಾಣಿ ಎಂಬ ಅಂಶವನ್ನೂ, ಪ್ರತಾಪನ ಮಡದಿಯೆಂಬ ವಿಷಯವನ್ನೂ ಮರೆತಿರಲಿಲ್ಲ. ಆಕೆ ತನ್ನ ಕಡೆಯವರಾದ ಗ್ರೀಕರನ್ನು ಸೇರಿಕೊಳ್ಳಲು ಉತ್ಸಾಹಿತಳಾಗಿದ್ದಳು.

ಒಂದು ದಿನ ರಾತ್ರಿ ಕೋಟೆಯ ಗೋಡೆಯ ಮೇಲೇರಿ ಮೆಲ್ಲನೆ ಅಲ್ಲಿಂದ ಜಾರಿಕೊಳ್ಳಲು ಒಂದು ಹಗ್ಗವನ್ನು ಸಿದ್ಧಪಡಿಸಿಕೊಳ್ಳುತ್ತಿದ್ದಳು.







ಆಗ ಪಹರೆಯವನೊಬ್ಬನು ಆಕೆಯನ್ನು ಬಂಧಿಸಿ ಅರಮನೆಗೆ ಕರೆತಂದನು.

ಅರಿಭಯಂಕರನು ಆಕೆಯನ್ನು ಬಲಾತ್ಕಾರ ದಿಂದ ವಿವಾಹವಾದನು. ಈ ವಿವಾಹ ಟ್ರೋಜನರಿಗೆ ಸ್ವಲ್ಪವೂ ಸಂತೋಷವನ್ನುಂಟುಮಾಡಲಿಲ್ಲ.

ಚಂದ್ರನು ವಿರಕ್ತನಾಗಿ ಟ್ರಾಯ್ ನಗರವನ್ನು ತ್ಯಜಿಸಿ ಐಡಾಪರ್ವತದಮೇಲೆ ವಾಸಿಸಲು ಹೊರಟನು. ಚಂದ್ರನನ್ನು ಯುಕ್ತಿಯಿಂದ ವಶಪಡಿಸಿಕೊಂಡು ಆತನಿಂದ ಟ್ರಾಯ್ ನಗರದ ರಹಸ್ಯಗಳನ್ನೆಲ್ಲಾ ಅರಿತು ಸುಲಭವಾಗಿ ಯುದ್ಧದಲ್ಲಿ ವಿಜಯ ಸಾಧಿಸಬಹುದೆಂದು ಕಾಂಶುಕನು ರಾರಾಜನೊಂದಿಗೆ ಹೇಳಿದನು. ಚಂದ್ರನನ್ನು ಹಿಡಿದುತರಲು ರಾರಾಜನು ರೂಪಧರನನ್ನು ಕಳುಹಿಸಿದನು.

ಚಂದ್ರನು ಸೂರ್ಯವಲಯದಲ್ಲಿ ಹೇಮುಳ ತಂದೆಯ ಅತಿಥಿಯಾಗಿರುವಾಗ ರೂಪಧರನು ಆತನನ್ನು ಹುಡುಕಿಕೊಂಡು ಬಂದನು. "ನಾನು ಪ್ರಾಣದಮೇಲಿನ ಆಶೆಯಿಂದ ಯುದ್ಧಭೂಮಿಯಿಂದ ಓಡಿಬಂದಿಲ್ಲ. ಈ ಆಲಯದಲ್ಲಿ ಮೋಹನನು ಅನ್ಯಾಯರೀತಿಯಲ್ಲಿ ವಜ್ರಕಾಯನನ್ನು ಕೊಂದನು. ಅದಕ್ಕಿನ್ನೂ ಪ್ರಾಯಶ್ಚಿತ್ತ ನಡೆದಿಲ್ಲ. ಅದು ನನ್ನನ್ನು ಬಾಧಿಸುತ್ತಿದೆ. ಎಲ್ಲಾದರೂ ದೂರಪ್ರದೇಶದಲ್ಲಿ ನಾನು ಸುಖವಾಗಿ ಜೀವಿಸಲು ಏರ್ಪಾಟು ಮಾಡಿಕೊಟ್ಟರೆ ನಿಮಗೆ ಟ್ರಾಯ್ ನಗರದ ರಹಸ್ಯಗಳನ್ನು ತಿಳಿಸುವೆನು" ಎಂದು ಚಂದ್ರನು ರೂಪಧರನಿಗೆ ಹೇಳಿದನು. ರೂಪಧರನು ಕೂಡಲೇ ಒಪ್ಪಿಕೊಂಡನು. ಆಗ ಚಂದ್ರನು ರೂಪಧರನೊಂದಿಗೆ "ಮುಂದಿನ





ಬೇಸಿಗೆಯಲ್ಲಿ ಟ್ರಾಯ್ ನಗರ ಪತನವಾಗುವುದು ಖಂಡಿತ. ಆದರೆ ಕಾರ್ಯರೂಪಕ್ಕೆ ತರಲು ಮೂರು ಕೆಲಸಗಳಾಗಬೇಕು. ಒಂದು: ಪಿಸಾದಲ್ಲಿರುವ ಧ್ರೂಮಮುಖನ ಭುಜದ ಎಲುಬಿದೆ. ಅದು ನಿಮ್ಮ ಶಿಬಿರವನ್ನು ಸೇರಬೇಕು. ಎರಡು: ನವಯೋಧನು ರಣರಂಗಕ್ಕೆ ಬರಬೇಕು. ಮೂರು: ಬುದ್ಧಿಮತಿದೇವಿಯ ವಿಗ್ರಹವನ್ನು ಕೋಟೆಯಿಂದ ಅಪಹರಿಸಬೇಕು. ಅದು ಇರುವತನಕ ಟ್ರಾಯ್ ನಗರವನ್ನು ಎಂದೂ ಯಾರೂ ಬೇಧಿಸಲಾರಿರಿ."

ಈ ರಹಸ್ಯ ತಿಳಿದಕೂಡಲೇ ರಾರಾಜನು ಧ್ರೂಮಮುಖನ ಅಸ್ಥಿಯನ್ನು ತರಲು ಕೆಲವರನ್ನು ಪಿಸಾಗೆ ಕಳುಹಿಸಿದನು. ವಜ್ರಕಾಯನ ಹನ್ನೆರಡು ವರ್ಷದ ಮಗನಾದ ನವಯೋಧನು ಸ್ಕೈರಾಸ್‌ನಲ್ಲಿದ್ದನು. ಅವನನ್ನು ಕರೆತರಲು ರೂಪಧರ, ರಕ್ತವರ್ಣ, ದೇವಮಯರು ಹಡಗಿನಲ್ಲಿ ಹೊರಟರು. ನವಯೋಧನು ಯುದ್ಧರಂಗದಲ್ಲಿ ಕಾಲಿಟ್ಟಕೂಡಲೇ ಅವನಿಗೆ ತನ್ನ ತಂದೆಯಾದ ವಜ್ರಕಾಯನ ಪ್ರೇತಾತ್ಮ ಕಾಣಿಸಿತು. ವಜ್ರಕಾಯನ ಶಸ್ತ್ರಾಸ್ತ್ರಗಳನ್ನು ರೂಪಧರನು ನವಯೋಧನಿಗೆ ಕೊಟ್ಟನು.

ವಯಸ್ಸಿನಲ್ಲಿ ಕಿರಿಯವನಾದರೂ ನವಯೋಧನು ರಣರಂಗದಲ್ಲಿ ತನ್ನ ತಂದೆಯ ಹೆಸರನ್ನು ಕೀರ್ತಿಯನ್ನು ಉಳಿಸಿದನು. ಅವನು ಯುದ್ಧ ವ್ಯೂಹದ ರಚನೆಯಲ್ಲಿ ಗ್ರೀಕರಿಗೆ ಬೇಕಾದ ಸಲಹೆ ಕೊಡುತ್ತಿದ್ದನು.

ಬುದ್ಧಿಮತಿಯ ವಿಗ್ರಹವನ್ನು ಅಪಹರಿಸುವ ಕಾರ್ಯವೊಂದು ಉಳಿಯಿತು. ಈ ಕೆಲಸ



ಮಾಡಲು ರೂಪಧರ, ದೇವಮಯರು ಸಿದ್ಧರಾದರು. ರೂಪಧರನು ದೇವಮಯನಿಂದ ರಕ್ತ ಚಿಮ್ಮುವಂತೆ ಹೊಡೆಯಿಸಿಕೊಂಡು ಟ್ರಾಯ್ ನಗರವನ್ನು ಪ್ರವೇಶಿಸಿದನು. ಭವನಸುಂದರಿ ಅವನನ್ನು ಕೂಡಲೇ ಗುರುತುಹಿಡಿದಳು. ಆತನು ಹಾಗೆ ಬರಲು ಕಾರಣವೇನೆಂದು ತಿಳಿಯಲು ಆಕೆ ಬಹು ಪ್ರಯತ್ನಿಸಿದಳು. ಆದರೆ ರೂಪಧರನು ಆಕೆಯ ಪ್ರಶ್ನೆಗಳಿಗೆ ಸಮಂಜಸವಾದ ಉತ್ತರ ಕೊಡಲಿಲ್ಲ. ಆಕೆ ಆತನನ್ನು ತನ್ನ ಅಂತಃಪುರಕ್ಕೆ ಕರೆದುಕೊಂಡು ಹೋಗಿ ಸ್ನಾನ ಮಾಡಿಸಿ, ಊಟವಿಟ್ಟು "ನಾನಿಲ್ಲಿ ಖೈದಿಯ ಬಾಳು ಬಾಳುತ್ತಿರುವೆನು. ಸ್ವದೇಶಕ್ಕೆ ಹಿಂತಿರುಗಲು ಕಾತರಳಾಗಿದ್ದೇನೆ. ಈ ವಿಷಯ ನನ್ನ ಅತ್ತೆಯವರಿಗೆ ತಿಳಿದಿದೆ. ಆಕೆ ನನ್ನ ಪಕ್ಷ ವಹಿಸಿರುವಳು. ನಿಮ್ಮ ಕಾರ್ಯಕ್ರಮದ ವಿವರವನ್ನು ನನಗೆ ತಿಳಿಸಿ" ಎಂದಳು.

ಅದೇ ಸಮಯಕ್ಕೆ ವರ್ಧನನ ಹೆಂಡತಿ ಅಲ್ಲಿಗೆ ಬಂದಳು. ರೂಪಧರನಿಗೆ ಜೀವವೇ ಹಾರಿ ಹೋದಂತಾಯಿತು. ಆತನು ಆಕೆಯ ಪಾದಗಳ ಮೇಲೆ ಬಿದ್ದು ಕಣ್ಣೀರು ಸುರಿಸುತ್ತಾ "ನನ್ನನ್ನು ಬಯಲಿಗೆಳೆಯಬೇಡಿ" ಎಂದು ಅಂಗಲಾಚಿದನು. ಆಕೆ ತಾನೇನು ಆತನಿಗೆ ಕೇಡು ಮಾಡುವುದಿಲ್ಲವೆಂದು ಭರವಸೆಕೊಟ್ಟು, ಸುರಕ್ಷಿತವಾಗಿ ಸ್ವಸ್ಥಾನವನ್ನು ಸೇರಲು ಸಹಾಯ ಮಾಡಿದಳು.

ಹೋಗುವಾಗ ರೂಪಧರನು ಬುದ್ಧಿಮತಿ ವಿಗ್ರಹವನ್ನು ಅಪಹರಿಸಿದನು. ಕೋಟೆ ಗೋಡೆಯ ಆಚೆ ಕಾದಿದ್ದ ದೇವಮಯನ ಭುಜದ ಮೇಲೆ ಅದನ್ನಿರಿಸಿ, ಇಬ್ಬರೂ ಹುಣ್ಣಿಮೆಯ ಬೆಳದಿಂಗಳಲ್ಲಿ ಶಿಬಿರದಕಡೆ ಹೊರಟರು.

ರೂಪಧರನಿಗೆ ಇದ್ದಕ್ಕಿದ್ದಂತೆಯೇ ದುರ್ಬುದ್ಧಿ ಹುಟ್ಟಿತು. ಬುದ್ಧಿಮತಿ ವಿಗ್ರಹವನ್ನು ತಂದ ಕೀರ್ತಿ ತನಗೇ ಲಭಿಸಬೇಕೆಂದು ಆತನು ಹಾತೊರೆದನು. ಒಂದೆರಡು ಹೆಜ್ಜೆ ಹಿಂದಕ್ಕಿಟ್ಟು, ದೇವಮಯನಮೇಲೆ ತನ್ನ ಖಡ್ಗವನ್ನು ಎತ್ತಿದನು. ಖಡ್ಗದ ನೆರಳನ್ನು ಕಂಡ ದೇವಮಯನು ಸರ್ರನೆ ತಿರುಗಿ, ತನ್ನ ಕತ್ತಿಯಿಂದ ರೂಪಧರನನ್ನು ನಿರಾಯುಧನನ್ನಾಗಿ ಮಾಡಿದನು. ಆತರುವಾಯ ರೂಪಧರನನ್ನು ಹೆಡಮುರಿದು ಕಟ್ಟಿ, ಒದೆಯುತ್ತಾ ಶಿಬಿರಕ್ಕೆ ಎಳೆದುಕೊಂಡು ಹೋದನು.

[ಇನ್ನೂ ಇದೆ]



## ಹೋ ೀ ಯಿ ತು



ಹೋಯಿತು - ಹೋಯಿತು—
ಹೊರಟೇ - ಹೋಯಿತು—
ನನ್ನಿಂದಾಗದು ನಿನ್ನಿಂದಾಗದು
ಕಡೆಗಾದೇವರೆ ಬಂದರು ಅಣ್ಣ
ಗತಿಸಿದ ಕಾಲವ ಹಿಡಿಯುವನೆ?
ನೀಮಾತಾಡಿದ ಮಾತನು ಅಣ್ಣ
ಬೇರಾರಾದರು ಹೇಳಲು ಬಹುದು
ಬೇಕಾದರೆ ಅದನೇ ಹಿಡಿಯಲುಬಹುದು
ಆದರೆ ನೀನೇ ಯೋಚಿಸಿನೋಡು
ಗತಿಸಿದ ಕಾಲವ ಹಿಡಿಯುವರಾರು?
ಮಾರ್ಕಾಂಡೇಯನ ತಪದಿಂದಾ
ದೇವರು ಕೊಟ್ಟಿಹ ವರದಿಂದಾ
ವಯಸ್ಸದಿನಾರರ ಯುವಕನಹಾಗೆ
ಮಾರ್ಕಾಂಡೇಯನು ಕಂಡನೆಹೊರತು
ಗತಿಸಿದ ಕಾಲವ ಹಿಡಿದನೆ ಹೇಳಿ?
ಉಂಗುರ ಕುಂಗುರ ಜೋಡಿಸಿ ಇದ್ದರು
ಮುರಿದೋ ಕಡಿದೋ ಬಿಡಿಸಲುಬಹುದು
ಕಾಯಿಸಿ ಕರಗಿಸಿ ಜೋಡಿಸಬಹುದು
ಆದರೆ ಗತಿಸಿದ ಕಾಲವ ಹಿಡಿಯಲು
ಏನೇ ಮಾಡಲಿ ಸಾಗುವುದೇನು?

—ಟಿ. "ನಂರೆಡ್ಡಿ"

## ನಿ ದ್ದೆ



"ನಿದ್ದೆ, ನಿದ್ದೆ, ನೀನೆಲ್ಲಿದ್ದೆ?"
"ಈ ಧರೆಯಾಚೆಯ ಸ್ವರ್ಗದಲಿದ್ದೆ
ಅದ್ಭುತ ಸುಖವನು ನೀಡುತಲಿದ್ದೆ
ತದ್ವಿಧ ಸುಖದಿಂ ಮೆರೆಯುತಲಿದ್ದೆ.
ಸುಧಾಧಾರೆಗಳ ಸವಿಯುತಲಿದ್ದೆ."
"ಆದೊಡನೇತಕೆ ಇಲ್ಲಿಗೆ ಬಂದೆ?
ಮಾದಕ ಪೇಯವ ನೇತಕೆ ತಂದೆ?
ಕಾಡದ ಸಗ್ಗವನೇತಕೆ ತೊರೆದೆ?"
"ಇದು ಆದೇವನ ಸುಗ್ರೀವಾಜ್ಞೆ.
ಕೂಡಲೆಮರ್ತ್ಯರ ಹಿಡಿಯೆಲೆ ನಿದ್ದೆ.
ಅಂದರೆ ಮಾತ್ರವೆ ನಾಪಾರಾದೆ.
ತಡೆದರೆ ಆ ಜನಬಿಡುವರೆ ಮತ್ತೆ?
ಸಿಡಿಲನೆಕೆಡಿಸುವ ಬಾಂಬಿಗೆ ತುತ್ತೆ!
ಧಡಧಡ ಬೇಗಿಳಿ ಭೂಮಿಗೆತೊತ್ತೇ?'
ಇಂತುಬಂದೆನಾ ಭೂಮಿಗೆ ಗೊತ್ತೆ?"
"ನಿದ್ದೇ ನಿದ್ದೆ! ಈಗೆಲ್ಲಿರುವೆ?"
"ತೊದಲುವಕೂಸಿನ ಉಡಿಯಲ್ಲಿರುವೆ.
ಮುದುಕರ ನೆಲ್ಲೆಡೆ ಅನುಸರಿಸಿರುವೆ.
ಮುದ್ದಿನ ಮಕ್ಕಳ ಜತೆಯಲ್ಲಿರುವೆ.
ಸದ್ದಿಲ್ಲದ ಸವಿ ಸಮಯದಲಿರುವೆ.
ಇದೊ ಚಂದಣ್ಣನ ನೆನೆಯುತಲಿರುವೆ"

—ಕೆ. ಆರ್. ಮೋಹನ



# ಸೌಖ್ಯಪ್ರಾರಬ್ಧ

ಹಿಂದೆ ಡೆಲ್ಲಿ ಬಾದಷಹನಬಳಿ ವಿಜಯದಾಸನೆಂಬ ಪ್ರಧಾನಿ ಇದ್ದನು. ಹೆಸರಿಗೆ ಚಕ್ರವರ್ತಿಯಿದ್ದರೂ ರಾಜ್ಯದ ಪರಿಪಾಲನೆಯನ್ನೆಲ್ಲಾ ವಿಜಯದಾಸನೇ ನೋಡಿಕೊಳ್ಳುತ್ತಿದ್ದನು. ಅಂತಲೇ ದೇಶದಲ್ಲಿದ್ದ ಸಣ್ಣಪುಟ್ಟ ರಾಜರು, ಸಾಮಂತರು ಆತನನ್ನು ಭಯಭಕ್ತಿಯಿಂದ ಕಾಣುತ್ತಿದ್ದರು. ಆತನನ್ನು ಎಲ್ಲರೂ ವಿಜಯ ಮಹಾರಾಜರೆಂದು ಕರೆಯುತ್ತಿದ್ದರು.

ಸಮಸ್ತವಾದ ಭೋಗಗಳನ್ನು ಅನುಭವಿಸುವ ಸೌಕರ್ಯಗಳಿದ್ದರೂ ವಿಜಯದಾಸನ ಮನಸ್ಸು ವೈರಾಗ್ಯದಕಡೆಗೆ ಒಲಿದಿತ್ತು. ಆತನು ಪ್ರಸಿದ್ಧ ಕವಿ. ಕಾವ್ಯಗಳನ್ನು ಬರೆಯುನು. ಸಮಯ ದೊರೆತಾಗ ತತ್ವಗಳನ್ನು ರಚಿಸುವನು. ಆತನು ರಚಿಸಿದ ತತ್ವಗಳನ್ನು ಬೈರಾಗಿಗಳು ಹಾಡಿಕೊಂಡು ಆನಂದಿಸುತ್ತಿದ್ದರು. ಕಾಲಕ್ರಮೇಣ ವಿಜಯದಾಸನು ರಚಿಸಿದ ತತ್ವಗಳು ದೇಶದ ಮೂಲೆಮೂಲೆಗೂ ಹರಡಿತು.

ಹರಿದ್ವಾರದಲ್ಲಿದ್ದ ಒಂದು ಸನ್ಯಾಸಿಗಳ ಆಶ್ರಮಕ್ಕೆ ವಿಜ್ಞಾನಚಂದ್ರನೆಂಬ ಒಬ್ಬ ತತ್ವಜ್ಞಾನಿ ಬಂದನು. ಅಲ್ಲಿನ ಸನ್ಯಾಸಿಗಳು ಹಾಡಿದ ತತ್ವಗಳನ್ನು ಕೇಳಿ ಅವನಿಗೆ ತುಂಬಾ ಆನಂದವಾಯಿತು. "ಈ ತತ್ವಜ್ಞಾನಿ ಯಾರು? ಎಲ್ಲಿರುವನು?" ಎಂದು ವಿಜ್ಞಾನಚಂದ್ರನು ಅನೇಕರನ್ನು ಕೇಳಿದನು.

ತತ್ವಗಳ ರಚನಕಾರನ ಹೆಸರು ವಿಜಯದಾಸನೆಂತಲೂ, ಆತನು ಡೆಲ್ಲಿಯಲ್ಲಿರುವನೆಂದೂ ಅವನಿಗೆ ತಿಳಿಯಿತು. ಅಂತಹ ಪ್ರಸಿದ್ಧ ತತ್ವಜ್ಞಾನಿಯನ್ನು ಭೇಟಿಮಾಡಬೇಕೆಂಬ ಕುತೂಹಲ ಅವನಿಗುಂಟಾಯಿತು, ಅವನು ಹರಿದ್ವಾರದಿಂದ ಹೊರಟು ಡೆಲ್ಲಿಗೆ ಬಂದನು.

"ವಿಜಯದಾಸರೆಂಬ ತತ್ವಜ್ಞಾನಿಗಳು ಎಲ್ಲಿರುವರು?" ಎಂದು ವಿಜ್ಞಾನಚಂದ್ರನು ಅನೇಕರನ್ನು ಪ್ರಶ್ನಿಸಿದನು. ಯಾರೂ ಅವನಿಗೆ ಉತ್ತರ ಹೇಳದಾದರು.

ಡೆಲ್ಲಿನಗರ ತುಂಬಾ ವಿಶಾಲವಾದುದು. ಎಷ್ಟೋ ಜನ ತತ್ವಜ್ಞಾನಿಗಳಿರುತ್ತಾರೆ. ಅವರೆಲ್ಲರ ವಿಷಯ ಜನಸಾಮಾನ್ಯರಿಗೆ ತಿಳಿದಿರುವುದಿಲ್ಲ. ಮಹಾಮಂತ್ರಿಯಾದ ವಿಜಯಮಹಾ

ಎಚ್. ಸಿ. ಶೇಖರ

ರಾಜನನ್ನು ಡೆಲ್ಲಿಯಲ್ಲಿ ಪ್ರತಿಯೊಬ್ಬರೂ ಅರಿತಿರುವರು. ಆದರೆ ಆತನೇ ವಿಜಯದಾಸನೆಂದು ವಿಜ್ಞಾನಚಂದ್ರನಿಗೆ ತಿಳಿಯದು.

"ಇಂತಹ ಪ್ರಸಿದ್ಧ ತತ್ವಜ್ಞಾನಿಯನ್ನು ಈ ನಗರದ ಪ್ರಜೆಗಳು ಅರಿಯದಿರಲು ಕಾರಣ ವೇನು? ಬಹಳ ಸೋಜಿಗವಾಗಿದೆ" ಎಂದುಕೊಂಡು ವಿಜ್ಞಾನಚಂದ್ರನು ಅನೇಕ ವಾರಗಳ ಕಾಲ ಡೆಲ್ಲಿಯಲ್ಲೆಲ್ಲಾ ವಿಚಾರಿಸಿದ. ಆದರೆ ಪ್ರಯೋಜನವಾಗಲಿಲ್ಲ.

ಹೀಗಿರಲು ಒಂದು ದಿನ ಅವನು ಸನ್ಯಾಸಿಗಳ ಆಶ್ರಮವೊಂದನ್ನು ಹಾದು ಹೋಗುತ್ತಿರಲು, ಒಳಗಿಂದ ಯಾರೋ ವಿಜಯದಾಸನ ತತ್ವಗಳನ್ನು ಹಾಡುತ್ತಿರುವುದು ಕೇಳಿಸಿತು. ಕೂಡಲೇ ಅವನು ನೆಟ್ಟಗೆ ಒಳಗೆಹೋಗಿ "ಈ ತತ್ವಗಳನ್ನು ರಚಿಸಿದ ತತ್ವವೇತ್ತನಾದ ಕವಿ ಎಲ್ಲಿದ್ದಾನೆ?" ಎಂದು ಕೇಳಿದನು.

"ಅವರೇ ವಿಜಯ ಮಹಾರಾಜರು. ಡೆಲ್ಲಿ ಚಕ್ರವರ್ತಿಯ ಪ್ರಧಾನಿ. ಕೋಟೆಯಲ್ಲಿ ಅವರಿಗೊಂದು ಭವ್ಯಭವನವಿದೆ. ಅಲ್ಲಿಗೆ ಹೋಗಿ ಅವರ ದರ್ಶನಕ್ಕಾಗಿ ಪ್ರಯತ್ನಿಸಿ" ಎಂದರು ಸನ್ಯಾಸಿಗಳು.

ವಿಜ್ಞಾನಚಂದ್ರನಿಗೆ ಆಶ್ಚರ್ಯ ವಾಯಿತು. ಅವರ ಮಾತಿನಲ್ಲಿ ನಂಬಿಕೆ ಹುಟ್ಟಲಿಲ್ಲ. "ತತ್ವಜ್ಞಾನಿ ಮಹಾಮಂತ್ರಿಯಾಗಿರುವುದೆಂದರೇನು? ಆತನನ್ನು ಎಲ್ಲರೂ ಏಕೆ ಮಹಾರಾಜನೆಂದು ಕರೆಯುವರು? ನಂಬಲಾಗುವುದಿಲ್ಲ. ಇದರಲ್ಲಿ ಏನೋ ಮೋಸ ವಿರಬೇಕು" ಎಂದೆನಿಸಿತು. ಈ ರಹಸ್ಯವನ್ನು ಭೇದಿಸಲು ವಿಜ್ಞಾನ ಚಂದ್ರನು





ನೆಟ್ಟಗೆ ವಿಜಯಮಹಾರಾಜನ ಭವನಕ್ಕೆ ಹೋಗಿ "ನಾನು ಪ್ರಧಾನಿಗಳನ್ನು ಭೇಟಿಮಾಡಬೇಕಾಗಿದೆ" ಎಂದನು.

ದ್ವಾರಪಾಲಕರು ನಸುನಕ್ಕು ಅಸಾಧ್ಯವೆಂದು ಹೇಳಿದರು. "ರಾಜಾಧಿರಾಜರಿಗೇ ಮಹಾಮಂತ್ರಿಗಳ ದರ್ಶನವಾಗುವುದು ದುರ್ಲಭ. ಅವರು ವಾರಗಳ ಪರ್ಯಂತ ಬಾಗಿಲಲ್ಲಿ ಕಾದುಕೊಂಡಿರುತ್ತಾರೆ. ಹಾಗಿರುವಾಗ ನಿಮ್ಮಂತಹ ಸನ್ಯಾಸಿಗಳಿಗೆ ಅವರ ದರ್ಶನ ಅಷ್ಟು ಬೇಗನೇ ಹೇಗೆ ಲಭಿಸುವುದು?" ಎಂದರು.

"ವಿಜಯದಾಸನು ಭಾರಿ ವಂಚಕನಿರಬೇಕು. ಸುಖ ಸಂಪತ್ತುಗಳಲ್ಲಿ ಓಲಾಡುತ್ತಾ ಮಹಾಜ್ಞಾನಿಯಂತೆ ತತ್ವಗಳನ್ನು ಬರೆಯುತ್ತಾನೆ" ಎಂದುಕೊಂಡ ವಿಜ್ಞಾನಚಂದ್ರ. ಇಂತಹ ಮೋಸಗಾರನನ್ನು ಕಂಡು ಬುದ್ಧಿ ಹೇಳಬೇಕೆಂದು ನಿರ್ಧರಿಸಿ, ಅವನು ದ್ವಾರಪಾಲಕರೊಂದಿಗೆ "ನನಗೆ ಅವರನ್ನು ನೋಡಿಯೇ ತೀರಬೇಕು. ನಿಮ್ಮ ಪ್ರಧಾನಿಗಳ ಭೇಟಿಯಾಗುವವರೆವಿಗೆ ನಾನಿಲ್ಲೇ ಇರುತ್ತೇನೆ. ಈ ಮಾತನ್ನು ಅವರಿಗೆ ತಿಳಿಸಿ" ಎಂದನು.

ಮೊದಲು ದ್ವಾರಪಾಲಕರು ಅವನ ಮಾತುಗಳನ್ನು ಕಿವಿಗೆ ಹಾಕಿಕೊಳ್ಳಲಿಲ್ಲ. ಆದರೆ ಎರಡು ದಿನಗಳಾದರೂ ಸನ್ಯಾಸಿ ಆ ಜಾಗದಿಂದ ಕದಲದಿರುವುದನ್ನು ಕಂಡು ಅವರು ಮಹಾಮಂತ್ರಿಗೆ ಸನ್ಯಾಸಿಯ ವಿಷಯ ತಿಳಿಸಿದರು. "ಹಾಂ, ಎರಡು ದಿನಗಳಿಂದ ನನಗೇಕೆ ಈ ಸುದ್ದಿ ತಿಳಿಸಲಿಲ್ಲ? ಕೂಡಲೇ ಅವರನ್ನು ಒಳಗೆ ಕಳುಹಿಸಿ" ಎಂದ ಪ್ರಧಾನಿ.

ವಿಜ್ಞಾನಚಂದ್ರನು ಒಳಗೆ ಬಂದಾಗ ಮಹಾಮಂತ್ರಿ ಬಂಗಾರದ ತೂಗುಯ್ಯಾಲೆಯ ಮೇಲೆ ಒರಗು ದಿಂಬುಗಳನ್ನು ಆನುಕೊಂಡು ಕುಳಿತಿದ್ದನು. ದಾಸೀ ಜನ ಆತನಿಗೆ ಚಾಮರದಿಂದ ಬೀಸುತ್ತಿದ್ದರು. ಭಾರಿ ಭಾರಿ ಅಧಿಕಾರಿಗಳು ಪಕ್ಕದಲ್ಲಿ ಕೈ ಕಟ್ಟಿಕೊಂಡು ನಿಂತಿದ್ದರು. ಮಹಾಮಂತ್ರಿ ಯಾವುದೋ ಪತ್ರಗಳನ್ನು ಲಕ್ಷ್ಯಪೂರ್ವಕವಾಗಿ ನೋಡುತ್ತಿದ್ದನು.

ವಿಜ್ಞಾನಚಂದ್ರನು ಬಾಗಿಲಬಳಿ ನಿಂತು ಕೋಪದಿಂದ "ತತ್ವಗಳನ್ನು ರಚಿಸುವ ವಿಜಯದಾಸನು ನೀನೇ?" ಎಂದು ಜಬರಿಸಿ ಕೇಳಿದನು.

ಮಹಾಮಂತ್ರಿ ತಲೆ ಎತ್ತಿ "ಹೌದು, ಮಹಾಸ್ವಾಮಿ. ದಯಮಾಡಿಸಿರಿ. ಹೀಗೆ ಆ ಆಸನದಲ್ಲಿ

ಕುಳಿತುಕೊಳ್ಳುವಂತವರಾಗಿ" ಎಂದು ಬಹಳ ವಿನೀತನಾಗಿ ನುಡಿದನು.

" ಈ ಆಸನಗಳು ತತ್ವಜ್ಞಾನಿಯಂತೆ ನಟಿಸುತ್ತಾ ಇಹಲೋಕ ಸುಖಗಳನ್ನು ಅನುಭವಿಸುತ್ತಿರುವ ನಿನ್ನಂತಹ ಮೋಸಗಾರರಿಗೇ ಹೊರತು ನನ್ನಂತಹ ಜ್ಞಾನಿಗಳಿಗಲ್ಲ. ಈ ರೀತಿ ಸುಖದಲ್ಲಿ ಮುಳುಗಿರಲು ನಿನಗೆ ನಾಚಿಕೆಯಾಗುವುದಿಲ್ಲವೇ ?" ಎಂದು ಗದರಿಸಿದ ವಿಜ್ಞಾನಚಂದ್ರ.

" ಸ್ವಾಮಿ, ತಮಗೆ ತಿಳಿಯದಿರುವುದೇನಿದೆ ? ಇದು ಸೌಖ್ಯಪ್ರಾರಬ್ಧ" ಎಂದು ಸಮಾಧಾನಚಿತ್ತದಿಂದ ನುಡಿದ ಮಹಾಮಂತ್ರಿ.

ವಿಜ್ಞಾನಚಂದ್ರನು ವಿಸ್ಮಯ ಹೊಂದಿ " ಹಾಗೆಂದರೇನು?" ಎಂದು ಕೇಳಿದ.

" ಕಷ್ಟಗಳಂತೆಯೇ ಸುಖಗಳೂಸಹ ಪ್ರಾರಬ್ಧದ ಫಲವಾಗಿ ಬರುತ್ತಿವೆ. ಅವುಗಳಿಂದ ತಪ್ಪಿಸಿಕೊಳ್ಳಲಾರೆವು. ಅವುಗಳಿಗೆ ಅತೀತವಾಗಿರುವುದೇ ಜ್ಞಾನಿಯಾದವನು ಮಾಡಬೇಕಾದ ಕೆಲಸ" ಎಂದ ವಿಜಯದಾಸ.

" ನನ್ನನ್ನು ಮೋಸಗೊಳಿಸುತ್ತಿರುವೆ? ನಿನ್ನ ಈ ಸೌಖ್ಯಪ್ರಾರಬ್ಧವನ್ನು ನಾನು ಅಳಿಸಿ ಹಾಕಬಲ್ಲೆ" ಎಂದು ಗುಡುಗಿದ ವಿಜ್ಞಾನಚಂದ್ರ.

" ಓ, ಅಗತ್ಯವಾಗಿ. ಈ ಸುಖಗಳೂ ನನ್ನ ಪ್ರಯತ್ನದಿಂದ ಬಂದಿಲ್ಲ. ಇವು ನನಗೆ ಅಗತ್ಯವೂ ಇಲ್ಲ" ಎಂದ ವಿಜಯದಾಸ.

ಆ ರಾತ್ರಿ ವಿಜ್ಞಾನಚಂದ್ರನು ವಿಜಯದಾಸನು ಒಬ್ಬೊಂಟಿಗನಾಗಿರುವ ಸಮಯ




ನೋಡಿ " ಯಾರೊಂದಿಗೂ ಹೇಳದೆ ಈ ಕ್ಷಣವೇ ಉಟ್ಟಬಟ್ಟೆಯೊಂದಿಗೆ ನನ್ನೊಂದಿಗೆ ಹೊರಟು ಬಾ" ಎಂದನು.

" ಅಗತ್ಯವಾಗಿ. ನಡೆಯಿರಿ, ಹೋಗೋಣ" ಎಂದ ವಿಜಯದಾಸ.

ಅರ್ಧರಾತ್ರಿ ವೇಳೆ ಇಬ್ಬರೂ ಹೊರಟು ನಿಂತರು. ಅವರಿಬ್ಬರೂ ಬೆಳಗಾಗುವಷ್ಟರಲ್ಲಿ ನಗರವನ್ನು ದಾಟಿ ಬಹಳ ದೂರ ಹೋದರು. ವಿಜ್ಞಾನಚಂದ್ರನು ಮಹಾಮಂತ್ರಿಯನ್ನು ಮಧ್ಯಾಹ್ನದವರೆವಿಗೂ ಅನ್ನ ಪಾನಗಳಿಲ್ಲದೆ ಒಂದೇಸವನೆ ನಡೆಯಿಸಿದನು. ನಡುಮಧ್ಯಾಹ್ನವಾಯಿತು. ಒಂದು ಮರುಭೂಮಿಯಂತಹ ಪ್ರದೇಶದಲ್ಲಿ ಆಲದಮರವೊಂದಿತ್ತು. " ಇಕೋ, ನೀನು ಈ ಆಲದಮರದ ಕೆಳಗೆ ಕುಳಿತಿರು.

ನಾನು ಇಲ್ಲೇ ಹತ್ತಿರದಲ್ಲಿರುವ ಯಾವುದಾದರೂ ಗ್ರಾಮಕ್ಕೆ ಹೋಗಿ ಭಿಕ್ಷೆ ಬೇಡಿ ತರುವೆನು. ನಾವು ಊಟ ಮುಗಿಸಿ ಮುಂದಕ್ಕೆ ಪ್ರಯಾಣ ಸಾಗಿಸೋಣ" ಎಂದು ಹೇಳಿ ವಿಜ್ಞಾನಚಂದ್ರನು ಹೊರಟುಹೋದನು.

ರಾತ್ರಿಯೆಲ್ಲಾ ನಿದ್ರೆ ಯಿಲ್ಲದಿದ್ದರಿಂದಲೂ, ಶರೀರ ಶ್ರಮಕ್ಕೆ ಅಭ್ಯಾಸವಿಲ್ಲದ ಕಾರಣದಿಂದಲೂ ಮರದ ನೆರಳಿಗೆ ಬಂದ ಕೂಡಲೇ ವಿಜಯದಾಸನಿಗೆ ನಿದ್ರೆ ಬಂತು. ಆತನು ನೆಲದ ಮೇಲೆ ಮಲಗಿ ಗಾಢನಿದ್ರಾಸಕ್ತನಾದನು.

ವಿಜ್ಞಾನಚಂದ್ರನು ಹೊರಟ ಸ್ವಲ್ಪಹೊತ್ತಿಗೆ ಒಂದು ಭಾರಿ ಪರಿವಾರ ಆಲದಮರದ ಕಡೆ ಬಂತು. ಆ ಪರಿವಾರ ನೇಪಾಳದೇಶದರಸನದು. ಆತನು ಅತ್ಯವಸರವಾದ ರಾಜಕಾರ್ಯದ ನಿಮಿತ್ತ ಡೆಲ್ಲಿಯಲ್ಲಿರುವ ಮಹಾಪ್ರಧಾನಿಯನ್ನು ಕಾಣಲು ಈ ರೀತಿಯಾಗಿ ಹೊರಟಿದ್ದನು.

ಈ ಪರಿವಾರ ಹಿಂದೆ ತಂಗಿದ್ದ ಸ್ಥಳವನ್ನು ಮುಂಜಾನೆಯೇ ಬಿಟ್ಟಿತ್ತು. ಮಟಮಟ ಮಧ್ಯಾಹ್ನವಾದರೂ ಅವರಿಗೆ ಮಕ್ಕಾಂಹಾಕಲು ಪ್ರಶಸ್ತವಾದ ಸ್ಥಳ ಸಿಕ್ಕಿರಲಿಲ್ಲ. ಕೊನೆಗೆ ಅವರು ಆಲದಮರವನ್ನು ಕಂಡು ಅಲ್ಲಿಗೆ ಬಂದರು.

ಮರದ ಕೆಳಗೆ ಗಾಢನಿದ್ರೆಯಲ್ಲಿದ್ದ ವಿಜಯದಾಸನನ್ನು ಕಂಡ ಕೂಡಲೇ ನೇಪಾಳದರಸನು ಗುರುತು ಹಿಡಿದನು.

ಕೂಡಲೇ ಆತನು ತನ್ನ ಸ್ವಂತ ಡೇರೆಯನ್ನು ವಿಜಯದಾಸನು ಮಲಗಿದ್ದ ಸ್ಥಳದಲ್ಲಿ ಹಾಕಿಸಿದನು. ಅನಂತರ ಬಲು ಜಾಗರೂಕತೆಯಿಂದ ತನ್ನ ಹಂಸತೂಲಿಕಾ ತಲ್ಪದಮೇಲೆ ನೌಕರರ



ಸಹಾಯದಿಂದ ಆತನನ್ನು ಮಲಗಿಸಿ, ಸುತ್ತಲೂ ಪನ್ನೀರು ಚಿಮುಕಿಸಿ, ಚಾಮರ ಹಾಕುವವರನ್ನು ಏರ್ಪಾಟುಮಾಡಿಸಿ, ಸಮೀಪದಲ್ಲೇ ತಾನೊಂದು ಕುರ್ಚಿಯಲ್ಲಿ ಕುಳಿತು, ಮಹಾಮಂತ್ರಿ ನಿದ್ರೆಯಿಂದ ಎಚ್ಚರವಾಗುವ ಸಮಯಕ್ಕಾಗಿ ಎದುರುನೋಡುತ್ತಿದ್ದನು. ಇಷ್ಟಾದರೂ ವಿಜಯದಾಸನಿಗೆ ನಿದ್ರಾಭಂಗವಾಗಲಿಲ್ಲ.

ವಿಜ್ಞಾನಚಂದ್ರನು ಭಿಕ್ಷೆಯನ್ನು ಪಡೆದು ಹಿಂತಿರುಗುವ ವೇಳೆಗೆ ಆಲದಮರದ ಕೆಳಗಿದ್ದ ಡೇರೆಗಳ ಸಮೂಹವನ್ನು ಕಂಡು ಬೆರಗಾದನು. ಸನಿಯದಲ್ಲೇ ಕುದುರೆಗಳೂ, ಆನೆಗಳೂ ಇದ್ದುವು. ಆಯುಧಪಾಣಿಗಳಾದ ಭಟರು ಕಾವಲು ಕಾಯುತ್ತಿದ್ದರು. ಒಂದು ಕಡೆ ದೊಡ್ಡದೊಂದು ಒಲೆ ಉರಿಯುತಲಿತ್ತು.

ವಿಜಯದಾಸನು ಏನಾದನೋ, ಈ ಡೇರೆಗಳ ವಿಷಯವೇನೋ ವಿಜ್ಞಾನಚಂದ್ರನಿಗೆ ಅರ್ಥವಾಗಲಿಲ್ಲ. ತಾನತ್ತ ಹೋದಕೂಡಲೇ ವಿಜಯದಾಸನು ಇವುಗಳೆಲ್ಲವನ್ನೂ ತರಿಸಿಕೊಂಡಿರಬಹುದೆಂದು ಭಾವಿಸಿದನು. ಆದರೆ ಅದು ಅಸಾಧ್ಯವಾದ ಕೆಲಸವಾಗಿ ಕಾಣಿಸಿತು.

ಅವನು ದಿಗ್ಭ್ರಮೆಯಿಂದ ನಿಂತಿರಲು ಭಟನೊಬ್ಬನು ಬಂದು "ಇದು ನೇಪಾಳದರಸರ ಶಿಬಿರ. ನೀನು ಯಾರು? ನಡಿಯಾಚೆ" ಎಂದು ಗದರಿಸಿದನು.

"ನಾನು ವಿಜಯದಾಸನಿಗಾಗಿ ಹುಡುಕುತ್ತಿರುವೆನು" ಎಂದ ವಿಜ್ಞಾನಚಂದ್ರ.

"ಅವರಿನ್ನೂ ನಿದ್ರೆಯಿಂದ ಎಚ್ಚೆತ್ತಿಲ್ಲ. ಮಹಾಪ್ರಭುಗಳೂ ಸಹ ಅವರೊಂದಿಗೆ ಮಾತನಾಡಲು



ತವಕದಿಂದಿರುವರು. ಅವರ ದರ್ಶನ ಪಡೆಯಲು ಈಗ ಸಾಧ್ಯವಿಲ್ಲ" ಎಂದರು ಭಟರು.

ಆಗಲೇ ವಿಜಯದಾಸನು ನಿದ್ದೆಯಿಂದ ಕಣ್ಣುಜ್ಜಿಕೊಳ್ಳುತ್ತಾ ಎಚ್ಚೆತ್ತನು. ಎದುರಿಗೆ ನೇಪಾಳದರಸನು ಕಾಣಿಸಲು ಒಬ್ಬರನ್ನೊಬ್ಬರು ಪ್ರೀತಿಯಿಂದ ಅಪ್ಪಿಕೊಂಡರು.

"ನೀವು ಯಾವಾಗ ಬಂದಿರಿ? ನನ್ನನ್ನೇಕೆ ನಿದ್ರೆಯಿಂದ ಎಬ್ಬಿಸಲಿಲ್ಲ. ನನ್ನೊಂದಿಗೆ ಒಬ್ಬ ಸನ್ಯಾಸಿ ಬಂದಿದ್ದ. ಆತನೆಲ್ಲಿ?" ಎಂದು ವಿಜಯ ದಾಸನು ಕೇಳಿದ.

ನೇಪಾಳದರಸನು ತನ್ನ ಭಟರಿಗೆ "ಆಜೂ ಬಾಜು ಯಾರಾದರೂ ಸನ್ಯಾಸಿಯಿದ್ದರೆ ಕರೆದು ಕೊಂಡು ಬನ್ನಿ" ಎಂದು ಆಜ್ಞಾಪಿಸಿದನು.

ಭಟರು ಕೂಡಲೇ ವಿಜ್ಞಾನಚಂದ್ರನನ್ನು ನೇಪಾಳದರಸನ ಗುಡಾರಕ್ಕೆ ಕರೆತಂದರು. ಆತ ನಿಗೆ ಹಂಸತೂಲಿಕಾತಲ್ಪದಮೇಲೆ ಕುಳಿತಿದ್ದ ವಿಜಯದಾಸನು ಕಾಣಿಸಿದನು. ಸ್ವತಃ ನೇಪಾಳ ದರಸನೇ ಆತನಿಗೆ ಗಾಳಿಬೀಸುತ್ತಿದ್ದನು.

ವಿಜ್ಞಾನಚಂದ್ರನನ್ನು ಕಂಡಕೂಡಲೇ ವಿಜಯದಾಸನೆದ್ದು ನಿಂತು "ಸ್ವಾಮಿ, ನೀವು ಅತ್ತ ಹೊರಟಕೂಡಲೇ ನನಗೆ ಗಾಢ ನಿದ್ರೆ ಬಂತು. ನನಗೆ ಎಚ್ಚರವಾದಾಗ ಈ ಹಂಸ ತೂಲಿಕಾತಲ್ಪದಲ್ಲಿ ಮಲಗಿದ್ದೇನೆ. ಇವರು ನೇಪಾಳದರಸರು. ಇವರು ಬರುವುದನ್ನು ನಾನರಿಯೆ. ಇನ್ನು ನಾವು ಹೊರಡೋಣವೇ?" ಎಂದು ಕೇಳಿದನು.

ಇದನ್ನು ಕೇಳಿ ನೇಪಾಳದರಸನು ಬೆಚ್ಚಿಬಿದ್ದು "ನಾನು ತಮ್ಮ ದರ್ಶನ ಪಡೆಯಲು ನಮ್ಮ ದೇಶದಿಂದ ಬರುತ್ತಿದ್ದೇನೆ. ನೀವೆಲ್ಲಿಗೆ ಹೋಗುವಿರಿ?" ಎಂದು ಕೇಳಿದನು.

"ಬೇಡ, ತಂದೆ. ನಾನು ಹೋಗುತ್ತೇನೆ. ನನಗೀಗ ಎಲ್ಲವೂ ಅರ್ಥವಾಯಿತು. ನಾನು ನಿನಗೇನೋ ಕಲಿಸಿಕೊಡಬೇಕೆಂದಿದ್ದೆ, ಆದರೆ ನಾನೇ ಕಲಿತುಕೊಳ್ಳುವಂತಾಯಿತು. ಸೌಖ್ಯ ಪ್ರಾರಬ್ಧವನ್ನು ನೀನು ಅನುಭವಿಸಲೇಬೇಕು. ಸಂತೋಷವಾಗಿ ಅನುಭವಿಸು. ನೀನು ಪರಮ ಜ್ಞಾನಿ. ಇದಕ್ಕೇನೂ ಸಂದೇಹವಿಲ್ಲ. ಈಗ ನನಗೆ ಜ್ಞಾನೋದಯವಾಯಿತು" ಎಂದು ಹೇಳಿ ವಿಜ್ಞಾನಚಂದ್ರನು ತನ್ನ ದೇಶಕ್ಕೆ ಹಿಂತಿರುಗಿದನು.



## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ 10 ರೂ.

1957 ಜೂಲೈ ಸಂಚಿಕೆಯಲ್ಲಿ ಪ್ರಕಟಿಸುವ ಫೋಟೋಗಳ ಮಾದರಿ :





ಮೇಲಿನ ಫೋಟೋಗಳಿಗೆ ಒಂದಕ್ಕೊಂದು ಸಂಬಂಧಿಸಿದಂತಿರುವ ಒಂದು ಜತೆ (ಎರಡು) ಶೀರ್ಷಿಕೆಗಳನ್ನು ಪೋಸ್ಟ್ ಕಾರ್ಡಿನಲ್ಲಿ ಬರೆದು ಈ ಕೆಳಗಿನ ವಿಳಾಸಕ್ಕೆ, ಮೇ 10 ನೇ ತಾರೀಕಿನೊಳಗೆ ನಮಗೆ ಬಂದು ತಲಪುವಂತೆ ಕಳಿಸತಕ್ಕದ್ದು. ನಂತರ ಬಂದವುಗಳನ್ನು ಗಮನಿಸುವುದಿಲ್ಲ.

ವಿಳಾಸ: **ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದ್ರಾಸು - 26.**

---

### ಈ ತಿಂಗಳ ಫೋಟೋ ಶೀರ್ಷಿಕೆಯ ಸ್ಪರ್ಧೆಯ ಫಲಿತ

ಮೊದಲನೇ ಫೋಟೋ: ಕೈಬಿಡದ ಪುರುಷನೇ ಪೌರುಷಶಾಲಿ!

ಎರಡನೇ ಫೋಟೋ: ಕಾಲ್ಗೆಡದ ಅಬಲೆಯೇ ಬಲಶಾಲಿನಿ!

ಕಳಿಸಿದವರು: ಕುಮಾರಿ ಸುಶೀಲಾ ಎಂ.

ಪ್ಲಾಟ್ ನಂ. 213, ಫ್ಲಾಟ್ ನಂ. 9, ವಡಲಾ, ಬೊಂಬಾಯಿ.

**ಬಹುಮಾನ ರೂ. 10/-ನ್ನು ಈ ತಿಂಗಳಿನಲ್ಲಿ ಕಳುಹಿಸಲ್ಪಡುತ್ತದೆ.**

# ಮೀನುಗಳು

ಮೀನುಗಳನ್ನು ನೋಡದವರಾರೂ ಇಲ್ಲ. ಹಲವರು ಅವುಗಳನ್ನು ತಿನ್ನುವರು. ಬಣ್ಣದ ಮೀನುಗಳನ್ನು ನೀರತೊಟ್ಟಿಯಲ್ಲಿಟ್ಟು ಸಾಕುತ್ತಾರೆ. ಅನೇಕ ಪ್ರಾಣಿಗಳು ನೀರಲ್ಲಿ ಬಿದ್ದರೆ ಶ್ವಾಸ ಬಿಗಿದು ಸಾಯುತ್ತವೆ. ಮೀನುಗಳು ಗಾಳಿಯಲ್ಲಿ ಶ್ವಾಸಕಟ್ಟಿ ಸಾಯುತ್ತವೆ. ಆದರೆ ನೀರಲ್ಲಿ ಹುಟ್ಟಿ ಬೆಳೆಯುವ ಅನೇಕ ಜಂತುಗಳು ಮೀನುಗಳಲ್ಲ. ಅವು ಬೆನ್ನೆಲುವಿಲ್ಲದ ಜಂತುಗಳು. ಮೀನುಗಳಿಗೆ ಬೆನ್ನೆಲುವುಂಟು.

ಮೀನುಗಳಲ್ಲಿ ಅನೇಕ ಬಗೆಗಳಿವೆ. ಅವುಗಳಲ್ಲಿ ಕೆಲವಕ್ಕೆ ಪ್ರತ್ಯೇಕ ಲಕ್ಷಣಗಳೂ ಇವೆ. ಕೊಂಬಿನ ಸೊರಾ ಎಂಬ ಮೀನಿಗೆ ಮೂತಿ ಕತ್ತಿಯಂತೆ ಚುಚ್ಚುವಹಾಗಿರುತ್ತದೆ. ಹಾರುವ ಮೀನೊಂದು ಇದೆ. ಅದು ನೀರಮೇಲಿನಿಂದ ಗಾಳಿಯಲ್ಲಿ ಎದ್ದು ಅನೇಕ ನೂರು ಅಡಿಗಳ ದೂರಕ್ಕೆ ಗಾಳಿಯಲ್ಲೇ ಹಾರುತ್ತದೆ. ಇನ್ನೊಂದು ಬಗೆಯ ಮೀನು ನೀರಿನಿಂದ ಬದಿಗೆಬಂದು ಬಾಲವನ್ನುಮಾತ್ರ ನೀರಿನಲ್ಲಿಟ್ಟುಕೊಳ್ಳುತ್ತದೆ. ಅದು ನೀರಿನಿಂದ ಶ್ವಾಸತೆಗೆದುಕೊಳ್ಳಲು ಆ ಬಾಲ ಉಪಯೋಗಬೀಳುತ್ತದೆ.

ಮುಳ್ಳಿನ ಮೀನಿಗೆ ಮುಳ್ಳ ಹಂದಿಯಹಾಗೆ ಮೈತುಂಬಾ ಮುಳ್ಳುಗಳಿರುತ್ತವೆ. ಅಪಾಯ ಬಂದಾಗ ಆ ಮುಳ್ಳುಗಳು ಎದ್ದು ನಿಲ್ಲುತ್ತವೆ. ಇನ್ನೊಂದು ಮೀನಿಗೆ ಬಾಲದಲ್ಲಿ ಮುಳ್ಳಿದೆ. ಇದರಿಂದ ಇದು ಶತ್ರುವನ್ನು ಚುಚ್ಚುತ್ತದೆ. ಕೆಲವು ಮೀಗಳಿಗೆ ಎಲುಬಿನಂಥ ಕವಚ ವಿರುತ್ತದೆ. ಆದರೆ ಹೆಚ್ಚು ಮೀನುಗಳಿಗೆ ಆಯುಧಗಳಿರುವುದಿಲ್ಲ. ಅವುಗಳನ್ನು ಇತರ ಜಂತುಗಳು ಸುಲಭವಾಗಿ ತಿಂದುಬಿಡುತ್ತವೆ. ಅಡಗಿಕೊಳ್ಳುವುದೂ ಬೇಗನೇ ಈಜಿ ಓಡಿಬಿಡುವುದೂ ಹೊರತು ಬೇರೆ ಉಪಾಯ ಅವುಗಳಿಗಿಲ್ಲ. ಒಂದುವಿಧ ಮೀನು ನೀರಿನ ತಳಕ್ಕೆ ಹೋಗಿ ಓತಿಕಾಟದಂತೆ ಬಣ್ಣದ ಬದಲಾವಣೆಗೊಂಡು ಆತ್ಮರಕ್ಷಣೆ ಮಾಡಿಕೊಳ್ಳುತ್ತದೆ. ದೊಡ್ಡದಾದಮೇಲೆ ಆತ್ಮರಕ್ಷಣೆ ಮಾಡಿಕೊಳ್ಳುವ ಇತರ ಮೀನುಗಳುಕೂಡಾ ಸಣ್ಣತನದಲ್ಲಿ ಬೇರೆ ಮೀನುಗಳ ಹೊಟ್ಟೆಗೆ ಸೇರುತ್ತವೆ. ಆದುದರಿಂದಲೇ ಹೆಣ್ಣು ಮೀನು ಲಕ್ಷ ಮೊಟ್ಟೆಯಿಟ್ಟರೂ ಎಲ್ಲವೂ ಮೀನುಗಳಾಗುವುದಿಲ್ಲ.



ಮೀನಗಳಲ್ಲಿಯೂ ಮಾಂಸಾಹಾರಿಗಳೂ ಶಾಖಾಹಾರಿಗಳೂ ಇವೆ. ಶಾಖಾಹಾರೀ ಮೀನುಗಳು ನೀರ ಚಿಗುರುಗಳನ್ನು ತಿಂದು ಬದುಕುತ್ತವೆ. ಮೀನುಗಳ ಮೂಗು ಶ್ವಾಸಿಸಲಿಕ್ಕೂ ವಾಸನೆನೋಡಲಿಕ್ಕೂ ಉಪಯೋಗಿಸುತ್ತವೆ. ಮೀನುಗಳು ತಾವು ತಿನ್ನಲಿರುವುದನ್ನು ಮೂಸಿನೋಡುವುದನ್ನು ಗಮನಿಸಬಹುದು. ಮೀನುಗಳಿಗೆ ಕಣ್ಣಿವೆ, ರೆಪ್ಪೆಗಳಿಲ್ಲ. ಕಣ್ಣುಗಳು ಸದಾ ತೆರೆದೇ ಇರುತ್ತವೆ. ಸಮುದ್ರತಳದಲ್ಲಿ ಹಗಲುಕೂಡಾ ಮಧ್ಯರಾತ್ರಿಯಹಾಗಿರುತ್ತದೆ. ಅಂಥಲ್ಲಿ ವಾಸಮಾಡುವ ಮೀನುಗಳಿಗೆ 'ದೀಪ'ಗಳಿವೆ. ಅದರ ಬೆಳಕಿನಲ್ಲಿ ಅವು ನೋಡಬಲ್ಲವು. ಒಂದು ವಿಧ ಮೀನುಗಳಿಗೆ ತಲೆಯಲ್ಲಿ ಕೊಂಬುಗಳಿವೆ. ಆ ಕೊಂಬುಗಳ ತುದಿಯಲ್ಲಿ ಪ್ರಕಾಶವಿರುತ್ತದೆ. ಬಹಳ ಮೀನುಗಳಿಗೆ ಕಿವಿಗಳಿದ್ದರೂ ಅವು ಕಾಣಿಸುವುದಿಲ್ಲ. ಅವುಗಳಿಗೆ ಶಬ್ದ ಕೇಳುವುದೋ ಇಲ್ಲವೋ ನಮಗೆ ತಿಳಿಯದು.

ಸಂಚಾರಕ್ಕೆ ಈಜುವುದಲ್ಲದೆ ಬೇರೆ ಉಪಾಯ ಅವುಗಳಿಗಿಲ್ಲ. ಅಂತೆಯೇ ಅವುಗಳ ಶರೀರ ಈಜಿಕೆಗೆ ಅನುಕೂಲವಾಗಿವೆ. ಅದರಬಾಲ ಚುಕ್ಕಾಣಿಯ ಕೆಲಸಮಾಡುತ್ತದೆ. ರೆಕ್ಕೆಗಳು 'ಬಾಲೆನ್ಸ್' ಕೊಡುತ್ತವೆ. ಅವುಗಳಿಗೆ ಗಾಳಿಯ ತಿದಿಗಳಿವೆ. ಇವುಗಳಲ್ಲಿ ಗಾಳಿಯನ್ನು ಹೀರಿಕೊಂಡು ಮೀನು ಮೇಲಕ್ಕೇಳುತ್ತದೆ; ಗಾಳಿಯನ್ನು ಬಿಟ್ಟು ತಳಕ್ಕೆ ಹೋಗುತ್ತದೆ.

ಕೆಲವು ಮೀನುಗಳು ಉಪ್ಪುನೀರಲ್ಲಿಯೂ, ಮತ್ತೆ ಕೆಲವು ಸೀನೀರಿನಲ್ಲಿಯೂ ಬದುಕುತ್ತವೆ. ಕೆಲವು ಹಾವಿನಹಾಗಿದ್ದರೂ ನಿಜಕ್ಕೂ ಅವು ಮೀನುಗಳೇ. ಇಂಥವು ಸ್ವಲ್ಪ ಕಾಲ ಉಪ್ಪುನೀರಿನಲ್ಲಿಯೂ ಇರುತ್ತದೆ. ಅಂತೆಯೇ ಇವು ನದಿಗಳಿಂದ ಸಮುದ್ರಕ್ಕೆ ಹೋಗಿ ಅಲ್ಲಿ ಮೊಟ್ಟೆಯಿಡುತ್ತವೆ; ಮರಿಗಳು ದೊಡ್ಡದಾಗಿ ನದಿಗೆ ತಿರುಗಿಬರುತ್ತವೆ. ಮೀನಿನೆಣ್ಣೆಯನ್ನು ನಾವು ಬಗೆಬಗೆಯಾಗಿ ಉಪಯೋಗಿಸುತ್ತೇವೆ.

ನಾವು ತೋಟದಲ್ಲಿ ಬೆಳೆಸುವ ಬಣ್ಣದ ಮೀನುಗಳನ್ನು ಮೊತ್ತಮೊದಲು ಚೀನಾದವರು ಅಭಿವೃದ್ಧಿಗೊಳಿಸಿದರು. ತರುವಾಯ ಜಾಪಾನಿವರು ಈ ಕೆಲಸ ಮಾಡಿದರು.






ಪ್ರೊಫೆಸರ್ ಪಿ. ಸಿ. ಸರ್ಕಾರ್

**ಬೆಂ**ಕಿಪೆಟ್ಟಿಗೆಯಿಂದ ಮಾಡುವ ಟ್ರಿಕ್ಕು ಬಹಳ ಸುಲಭ. ಇದನ್ನು ಮಾಡಲಿಕ್ಕೆ ಒಂದು ಸಾಧಾರಣ ಬೆಂಕಿಪೆಟ್ಟಿಗೆಯನ್ನು ತಂದು ಹರಿತವಾದ ಚೂರಿಯಿಂದ ಅದರ ನಡುವಿನಲ್ಲಿ ಸ್ವಲ್ಪ ಹೆಚ್ಚು ಕಡಮೆ ಅದರ ಅಡಿಯವರೆಗೂ ಕೊಯ್ಯಬೇಕು. ಹೀಗೆ ಕ್ಕೊದ ಕನ್ನದಲ್ಲಿ ಒಂದು ಇಸ್ಪೀಟೆಲೆಯನ್ನು ತೂರಿಸಬೇಕು. (ಚಿತ್ರ ನೋಡಿ) ಬೆಂಕಿಪೆಟ್ಟಿಗೆಯೊಳಗಿನ ಅರೆ ಪೆಟ್ಟಿಗೆಯನ್ನು ಈ ಇಸ್ಪೀಟೆಲೆ ಕದಲದಂತಿಟ್ಟರೂ ಅದನ್ನು ಇತ್ತಿಂದತ್ತ ಅತ್ತಿಂದಿತ್ತ ದೂಡಿ ತೋರಿಸುತ್ತಾನೆ ಐಂದ್ರಜಾಲಿಕ. (ಅದು ಹೇಗೆ ಅತ್ತಿತ್ತ ಜರುಗುತ್ತದೆಂಬುದನ್ನು ಚಿತ್ರದಲ್ಲಿ ಸೂಚಿಸಲ್ಪಟ್ಟಿದೆ.) ಈ ಟ್ರಿಕ್ಕು ನೋಡಿ ಎಲ್ಲರೂ ವಿಸ್ಮಯಪಡುತ್ತಾರೆ. ಈ ಟ್ರಿಕ್ಕಿಗಾಗಿ ಬೆಂಕಿಪೆಟ್ಟಿಗೆಯ ಒಳಗಿನ ಅರೆ ಪೆಟ್ಟಿಗೆಯನ್ನು ಮೊದಲೇ ಸಿದ್ಧಪಡಿಸಿರುವ ಸಂಗತಿ ಅವರಿಗೆ ತಿಳಿಯದು.

ಈ ಟ್ರಿಕ್ಕು ಮಾಡಿ ತೋರಿಸಲು ಐಂದ್ರಜಾಲಿಕನು ಮೊದಲೇ ಒಂದು ಬೆಂಕಿಪೆಟ್ಟಿಗೆ ತೆಗೆದುಕೊಂಡು ಅದನ್ನು ಈ ಕೆಳಗಿನ ವಿಧವಾಗಿ ತಯಾರಿಸಿಕೊಳ್ಳಬೇಕು. ಬೆಂಕಿಪೆಟ್ಟಿಗೆಯ ಟೊಳ್ಳು ಪೆಟ್ಟಿಗೆಯನ್ನು ಅಡಿಯಲ್ಲಿಮಾತ್ರ ಬಿಟ್ಟು ಉಳಿದ ಮೂರು ಕಡೆಯೂ ಹರಿತವಾದ ಚೂರಿಯಿಂದ ಕೊಯ್ಯಬೇಕು. ಬಳಿಕ ಅದರ ಅರೆಪೆಟ್ಟಿಗೆಯನ್ನು ತೆಗೆದು ಅದರಲ್ಲಿದ್ದ ಕಡ್ಡಿಗಳನ್ನೆಲ್ಲ ತೆಗೆಯಬೇಕು. ಈ ಕಡ್ಡಿಗಳನ್ನೆಲ್ಲಾ ಮೂರು ಭಾಗಗಳಾಗಿ ಕೊಯ್ಯಬೇಕು. ಆಮೇಲೆ ಅರೆಪೆಟ್ಟಿಗೆಯ ಎರಡು ಬದಿಗಳ ಮೂರು ಭಾಗಗಳಾಗಿ ಕೊಯ್ದು ನಡುವಿನ ಚೂರುಗಳನ್ನು ಕಿತ್ತು ಹಾಕಬೇಕು. ಅಡಿಮಾತ್ರ ಹಾಗೇ ಇರುತ್ತೆ. ಈಗ ಅರೆಪೆಟ್ಟಿಗೆಯಲ್ಲಿ 1 ಅಂಕೆ ಸೂಚಿರುವಲ್ಲಿ ಬೆಂಕಿಕಡ್ಡಿಚೂರುಗಳನ್ನು ಅಂಟಿನಿಂದ ಅಂಟಿಸಿ ತುಂಬಿಸಬೇಕು. ಹಾಗೆ 3 ಅಂಕೆ ಇರು

ವಲ್ಲಿ ಆ ಕಡ್ಡಿಗಳ ಕೊನೆಗಳನ್ನು ಅಂಟಿಸ ಬೇಕು. 2 ಅಂಕೆಯ ಭಾಗದಲ್ಲಿ ಅಡಿ ಹೊರತು ಮತ್ತೇನೂ ಇರುವುದಿಲ್ಲ. ಅಲ್ಲಿ ಕಡ್ಡಿಗಳೂ ಇರುವುದಿಲ್ಲ. ಈ ರೀತಿ ಯಾಗಿ ಬೆಂಕಿಪೆಟ್ಟಿಗೆ ಸಿದ್ಧಮಾಡಿದ ಪೂರ್ಣವಾದ ಮೇಲೆ ಇಸ್ಪೀಟೆಲೆಯಲ್ಲಿ ಮೋಸವಿಲ್ಲವೆಂದು ತೋರಿಸಲು ಅದನ್ನು ಪ್ರೇಕ್ಷಕರಿಗೆ ಕೊಡಬಹುದು.

ಇದು ಬಹಳ ಒಳ್ಳೆಯ ಟ್ರಿಕ್ಕಾದರೂ ಒಂದೇ ಪ್ರೇಕ್ಷಕರ ಇದಿರು ಎರಡು ಸಾರಿ







ಮೇಲೆ ಅದರಲ್ಲಿ ಇಸ್ಪೀಟೆಲೆ ತೂರಿಸಿದಾಗಲೂ ಅರೆಪೆಟ್ಟಿಗೆ ಹಿಂದೆ ಮುಂದೆ ಜರುಗುತ್ತದೆ. ಎಲ್ಲರಿಗೂ ಇದು ಅದ್ಭುತವಾಗಿರುತ್ತದೆ. ಪ್ರೇಕ್ಷಕರು ಇಸ್ಪೀಟೆಲೆಯಲ್ಲೇ ಏನೋ ಮೋಸವಿದೆ ಎಂದುಕೊಳ್ಳುತ್ತಾರೆ. ಟ್ರಿಕ್ಕು ಮಾತ್ರ ಮಾಡಿ ತೋರಿಸ ಬಾರದು. ಮತ್ತೊಂದು ವಿಷಯವೇನೆಂದರೆ, ಅರೆಪೆಟ್ಟಿಗೆಯಲ್ಲಿ ಕಡ್ಡಿಗಳನ್ನು ಚೆನ್ನಾಗಿ ಅಂಟಿಸದಿದ್ದರೆ ಕಡ್ಡಿಗಳು ಕೆಳಗೆ ಬಿದ್ದು ಹೋಗಿ ಮೋಸ ಹೊರಗಾದೀತು.



# ವಾರ್ತೆಗಳು-ವಿಶೇಷಗಳು

ಸುಮಾರು ಒಂದು ಕೋಟಿ ನಲುವತ್ತು ಲಕ್ಷಮಂದಿ ಪ್ರಜೆಗಳಿಗೆ ಆಯಾ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಶಿಕ್ಷಣವೀಯಲು ಒಂದು ಮಹತ್ತರ ಕಾರ್ಯಕ್ರಮಕ್ಕೆ ಉಪಕ್ರಮಿಸಿರುವುದಾಗಿ ಕೇಂದ್ರ ಸಮಾಜ ವಿಕಾಸ ಶಾಖಾ ಮಂತ್ರಿಗಳು ಹೇಳಿದ್ದಾರೆ. ಅದರಲ್ಲಿ ವ್ಯವಸಾಯ, ಪಶುಸಂರಕ್ಷಣೆ, ಗ್ರಾಮಪರಿಶ್ರಮ, ಪ್ರಜಾರೋಗ್ಯ, ಪರಿಶುದ್ಧತೆ, ಸಹಕಾರ, ಪಂಚಾಯತೀ, ಸಾರಿಗೆ ಸೌಕರ್ಯಗಳು, ಶಿಶು ಸಂಗೋಪನ ಕಾಯಕ್ರಮಗಳು ಮೊದಲಾದ ವಿಷಯಗಳಲ್ಲಿ ತರಪೇತು ಕೊಡಲಾಗುತ್ತದೆ.

*　　*　　*

ದೇಶದಲ್ಲಿ ಮ್ಯಾಟ್ರಿಕ್ಯುಲೇಟುಗಳಿಗೆ ಕೆಲಸ ಕಲ್ಪಿಸಿ ನಿರುದ್ಯೋಗ ನಿರ್ಮೂಲನ ಮಾಡಲಿಕ್ಕೆ ಇಂಡಿಯಾ ಸರಕಾರವು ಪ್ರಣಾಳಿಕೆಯೊಂದನ್ನು ತಯಾರಿಸಿರುತ್ತದೆ. ೧೯೫೭-೫೮ರಲ್ಲಿ ವಿವಿಧ ಪ್ರಾಂತಗಳಲ್ಲಿ ಉತ್ಪತ್ತಿ ಕೇಂದ್ರಗಳನ್ನು ಪ್ರಾರಂಭಿಸಲಿಕ್ಕಾಗಿ ೧೭ ಲಕ್ಷ ರೂಪಾಯಿ ಮಂಜೂರು ಮಾಡಿದ್ದಾರೆ. ಪ್ರತಿ ಕೇಂದ್ರವೂ ಎರಡು ಷಿಪ್ಟುಗಳಲ್ಲಿ ೩೦೦ ಮಂದಿ ಮ್ಯಾಟ್ರಿಕುಲೇಟರರಿಗೆ ಕೆಲಸ ತೋರಿಸಿ ಕೊಡಲಾಗುತ್ತದೆ.

*　　*　　*

ಶಾಂತಿಕಾಲದ ಪ್ರಯೋಜನಗಳಿಗಾಗಿ ಅಣುಶಕ್ತಿಯನ್ನು ಉಪಯೋಗಿಸಲು ಪ್ರಶಂಸಾರ್ಹವಾದ ಕೆಲಸ ಮಾಡಿದ್ದಕ್ಕಾಗಿ, ಫೋರ್ಡ್ ಕಂಪೆನಿಯವರ ಪ್ರತ್ಯೇಕ ಬಹುಮಾನವೊಂದು ಡೇನಿಷ್ ಪರಮಾಣು ಶಾಸ್ತ್ರಜ್ಞ, ನೋಬಲ್ ಬಹುಮಾನವನ್ನೂ ಪಡೆದಿರುವ ಪ್ರೊಫೆಸರ್ ನೀಲ್ಸ್ ಬೋಹರ್ ರವರಿಗೆ ಕೊಡಲ್ಪಡುವುದಾಗಿ ಪ್ರಕಟಿಸಿದ್ದಾರೆ. ಈ ಬಹುಮಾನದ ಬೆಲೆ ೭೫,೦೦೦ ಡಾಲರು. ಲೋಕ ಕಲ್ಯಾಣಕ್ಕಾಗಿ ಅಣುಶಕ್ತಿಯನ್ನು



ವಿನಿಯೋಗಿಸಲು ಅಂತರ್ಜಾತೀಯವಾಗಿ ಕೆಲಸವಾಗಬೇಕೆಂದು ಅಮೆರಿಕಾದ ಪ್ರೆಸಿಡೆಂಟ್ ಐಸೆನ್ ಹೋವರ್‌ರು ೧೯೫೫ ರಲ್ಲಿ ವಿಜ್ಞಪ್ತಿ ಮಾಡಿಕೊಂಡುದರ ಫಲವಾಗಿ ಫೋರ್ಡ್ ಮೋಟಾರ್ ಕಂಪೆನಿಯವರು ಈ ಬಹುಮಾನವನ್ನು ಏರ್ಪಡಿಸಿದ್ದಾರೆ.

*　　　*　　　*

**ಮಾ**ರ್ಚಿ ಯಲ್ಲಿ ನಡೆದ ಮಹಾಚುನಾವಣೆಯಲ್ಲಿ ಪಂಡಿತ ನೆಹ್ರೂಗಳಿಗೆ ೧,೯೦,೦೦೦ ಓಟುಗಳ ಮೆಜಾರಿಟೀ ಸಿಕ್ಕಿರುತ್ತದೆ.

*　　　*　　　*

**ಏ**ಷ್ಯಾದೊಳಗಿನ ಗ್ರಂಥಾಲಯಗಳಲ್ಲಿ ಢಿಲ್ಲಿಯಲ್ಲಿರುವ ಪಬ್ಲಿಕ್ ಗ್ರಂಥಾಲಯದ ವಾಚಕರ ಸಂಖ್ಯೆಯೇ ಹೆಚ್ಚೆಂದು, ಪ್ರಪಂಚ ವಿಜ್ಞಾನಸಮಿತಿ ಪ್ರಕಟಿಸಿದ ಒಂದು ನಿವೇದಿಕೆಯಲ್ಲಿ ತಿಳಿಸಲಾಗಿದೆ. ಏಷ್ಯಾದಲ್ಲಿ ಆದರ್ಶ ಪ್ರಾಯವಾದ ಲೈಬ್ರರಿಯಾಗಿ ಢಿಲ್ಲಿ ಸಂಸ್ಥೆಯನ್ನು ೧೯೫೧ ರಲ್ಲಿ ಇಂಡಿಯಾ ಸರಕಾರ ಮತ್ತು ಪ್ರಪಂಚ ವಿಜ್ಞಾನಸಮಿತಿ ಸೇರಿಕೊಂಡು ಸ್ಥಾಪಿಸಿವೆ.

*　　　*　　　*

**ಮೊ**ದಲನೇ ಪಂಚವಾರ್ಷಿಕ ಪ್ರಣಾಳಿಕೆ ಪ್ರಾರಂಭವಾದಾಗ ವರ್ಷಕ್ಕೆ ನಾಲ್ಕು ಕೋಟಿ ರೂ. ಬೆಲೆಬಾಳುವ ಕೇಬುಲ್ಸ್, ಸರಿಗೆಗಳು ಉತ್ಪತ್ತಿಯಾದುವು. ಆ ಪ್ರಣಾಳಿಕೆ ಪೂರ್ತಿಯಾಗುವಾಗ ವರ್ಷಕ್ಕೆ ೧೧ ಕೋಟಿ ರೂ. ಬೆಲೆಬಾಳುವ ಕೇಬುಲ್ಸ್, ಸರಿಗೆಗಳು ಉತ್ಪತ್ತಿಯಾಗಲು ಪ್ರಾರಂಭವಾಯಿತು.

*　　　*　　　*

**ಪೆ**ಟ್ರೋಲು, ಎಣ್ಣೆ, ಲೂಬ್ರಿಕೆಂಟುಗಳ ವಿನಿಯೋಗ ಪ್ರಣಾಳಿಕೆಯನ್ನು ನಿರ್ದುಷ್ಟವಾಗಿ ಮಾಡುವುದರಲ್ಲಿ ಕಷ್ಟಪಟ್ಟು ಕೆಲಸಮಾಡಿ, ಖರ್ಚಿನಲ್ಲಿ ಸರಾಸರಿ ಒಂದುವರೆ ಕೋಟಿ ರೂಪಾಯಿ ಆದಾಯವಾಗಲಿಕ್ಕೆ ತಕ್ಕ ಸೂಚನೆಗಳನ್ನು ಕೊಟ್ಟುದಕ್ಕೆ ಅಪ್ಪರ್ ಡಿವಿಜನ್ ಗುಮಾಸ್ತ ಶ್ರೀ ಸುಧೀರಚಂದ್ರದೇವ್ ಎಂಬವರಿಗೆ ಇಂಡಿಯಾ ಸೈನಿಕ ಪ್ರಧಾನ ಕಾರ್ಯಾಲಯವು ಸಾವಿರ ರೂಪಾಯಿಯ ಬಹುಮಾನವನ್ನು ಪಾರಿತೋಷಿಕವಾಗಿ ಕೊಟ್ಟಿರುತ್ತದೆ. ದೇಶೀಯ ಆರ್ಥಿಕ ವ್ಯವಸ್ಥೆಯನ್ನು ಉತ್ತಮಗೊಳಿಸುವುದರಲ್ಲಿ ಪ್ರತಿ ಪೈಸೆಯೂ ದುರ್ವ್ಯಯವಾಗದಂತೆ ನೋಡಿಕೊಳ್ಳ ಬೇಕಾದ ಪ್ರಸ್ತುತ ಸಮಯದಲ್ಲಿ ಇಷ್ಟು ದೊಡ್ಡ ಮೊತ್ತವು ಉಳಿತಾಯವಾಗುವ ಮಾರ್ಗ ತೋರಿಸಿದ ಶ್ರೀ ದೇವ್‌ರನ್ನು ರಕ್ಷಣಶಾಖಾ ಮಂತ್ರಿಗಳು ಪ್ರಶಂಶಿಸಿದರು.



# ಚಿ ತ್ರ ಕ ಥೆ





ಒಂದು ದಿನ ವಾಸು ಮತ್ತು ಗೋಪಿಯರು ತೋಟಕ್ಕೆ ಹೋದರು—ಪೇರಳೇ ಹಣ್ಣು ಕೊಯಿದು ತಿನ್ನ ಬೇಕೆಂದು. ಅವರ ಹಿಂದೆಯೇ 'ಟೈಗರ್' ಕೂಡಾ ಹೋಯಿತು. ಅವರನ್ನು ಹಿಡಿಯ ಬೇಕೆಂದು ತೋಟಗಾರ ಓಡಿಬಂದ. ಆಗ ಫಕ್ಕನೆ ಮರದ ಬುಡ ದಲ್ಲಿದ್ದ ಹುತ್ತದಿಂದೊಂದು ಹಾವು ಭುಸ್ಸೆಂದು ಅವನಕಡೆಗೆ ಹಾರಿತು. 'ಟೈಗರ್' ಹಾವನ್ನು ನೋಡಿ ಬೊಗಳಿತು. ಹಾವು ನಾಯಿಯ ಕಡೆತಿರುಗಿತು. ಈ ಸಂಧಿಯಲ್ಲಿ ತೋಟಗಾರ ಹಾವನ್ನು ಕೊಂದ. ಬಳಿಕ ಅವನೇ 'ಟೈಗರಿ'ನ ಸಹಾಯಕ್ಕಾಗಿ ತುಂಬಾ ಪೇರಳೇ ಹಣ್ಣು ಕೊಯಿದು ವಾಸೂ ಗೋಪಿಯರಿಗೆ ಕೊಟ್ಟ.





Printed by B. NAGI REDDI at the B. N. K. Press (Private) Ltd., and Published by him for Chandamama Publications, from Madras 26.—Controlling Editor: SRI 'CHAKRAPANI'

## ಸೂಚನೆ

ಬರುವ ತಿಂಗಳ 'ಚಂದಮಾಮ' ಸಂಚಿಕೆಗಳನ್ನು ಈ ತಿಂಗಳ ಕಡೇ ವಾರದಲ್ಲೇ ಪೋಸ್ಟ್ ಮಾಡಲಾಗುತ್ತದೆ. ಆ ಸಂಚಿಕೆಗಳು ತಕ್ಕ ಕಾಲದಲ್ಲಿ ನಿಮಗೆ ಸೇರದಿದ್ದರೆ, ನಿಮ್ಮೂರ ಪೋಸ್ಟಾಫೀಸಿನಲ್ಲಿ ನೀವು ಕಂಪ್ಲೇಂಟು ಕೊಟ್ಟು, ಆ ಸಂಗತಿ ನಮಗೂ ತಿಳಿಸಬೇಕಾಗಿ ಕೋರಲಾಗಿದೆ.

ಚಂದಮಾಮ ಪಬ್ಲಿಕೇಷನ್ಸ್
ವಡಪಳನಿ :: ಮದ್ರಾಸ್-26.

Photo by Vidyavrata



ಬಹುಮಾನ ಪಡೆದ ಶೀರ್ಷಿಕೆ

ಕಾಲ್ಗೆಡದ ಅಬಲೆಯೋ ಬಲಶಾಲಿನಿ!

ಕಳಿಸಿದವರು: ಕುಮಾರಿ ಸುಶೀಲಾ

